| ಕ್ರ. ಸಂ. | ಜೇ. ಸಂ | ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ (ಗ್ರೂಪ್ ಬಿ) | ಗ್ರೂಪ್ ಎ ಕಿರಿಯ ಶ್ರೇಣಿ ವೃಂದದಲ್ಲಿ ಬಡ್ತಿ ಹೊಂದಿದ ದಿನಾಂಕ | ಉಪನಿರ್ದೇಶಕ ರಾಗಿ ಬಡ್ತಿ ಹೊಂದಿದ ದಿನಾಂಕ | ಜಾತಿ ಎಸ್.ಸಿ./ ಎಸ್.ಟಿ. |
|---|---|---|---|---|---|---|---|
| 306. | 396 | ಎಸ್.ಹೆಚ್.ಬಟ್ಟೂರ | 01–06–51 | 01–01–79 | 21–06–99 | 18–12–2004 | |
| 307. | 425 | ಶಂಕರಪ್ಪ | 05–06–49 | 29–12–78 | 02–05–91 | 28–12–2004 | ಎಸ್.ಟಿ. |
| 308. | 467 | ವಿ.ಎಂ.ಉಮಾಕಾಂತ್ | 18–05–51 | 18–10–84 | 21–06–99 | 01–01–2005 | |
| 309. | 468 | ಜಿ.ನಾಗೇಂದ್ರಪ್ಪ | 03–06–49 | 31–10–84 | 21–06–99 | 01–01–2005 | |
| 310. | 466 | ಜಿ.ಆರ್.ತಿಪ್ಪೇಸ್ವಾಮಿ | 15–03–50 | 30–10–84 | 21–06–99 | 04–03–2005 | |
| 311. | 469 | ಫಿಲೋಮಿನಾಲೋಬೋ ಎ | 17–05–60 | 24–10–84 | 21–06–99 | 04–03–2005 | |
| 312. | 470 | ಎಸ್.ಆರ್.ಮನಹಳ್ಳಿ | 07–10–55 | 19–10–84 | 21–06–99 | 04–03–2005 | |
| 313. | 472 | ಕೆ.ಆನಂದ್ | 03–04–57 | 19–10–84 | 21–06–99 | 04–03–2005 | |
| 314. | 473 | ಅಬ್ದುಲ್ ವಾಜೀದ್ ಅಕ್ಕಿ.ಎಂ | 01–06–51 | 26–10–84 | 21–06–99 | 04–03–2005 | |
| 315. | 474 | ಬಿ.ನಂಡುಂಜಭಟ್ | 22–04–52 | 26–10–84 | 21–06–99 | 04–03–2005 | |
| 316. | 475 | ಸಿ.ವಿ.ಹಿರೇಮಠ್ | 01–06–57 | 26–10–84 | 21–06–99 | 04–03–2005 | |
| 317. | 476 | ಎಸ್.ಸಿ.ಹಿರೇಮಠ್ | 01–10–50 | 28–10–84 | 21–06–99 | 04–03–2005 | |
| 318. | 477 | ಸಿ.ಬಿ.ಹನುಮಂತಪ್ಪ | 18–01–49 | 29–10–84 | 21–06–99 | 04–03–2005 | |
| 319. | 478 | ಪಿ.ಎಸ್.ಯಾರಗಲ್ | 09–04–48 | 05–11–84 | 21–06–99 | 04–03–2005 | |
| 320. | 479 | ಎಂ.ಹೆಚ್.ಡೋಣೂರ | 10–06–56 | 22–10–84 | 21–06–99 | 04–03–2005 | |
| 321. | 480 | ವಿ.ಎಂ.ಪಾಟೀಲ್ | 10–05–51 | 20–10–84 | 21–06–99 | 04–03–2005 | |
| 322. | 481 | ಎಂ.ಪಿ.ದೇಶಪಾಂಡೆ | 30–08–52 | 27–10–84 | 21–06–99 | 09–08–2005 | |
| 323. | 482 | ಸಿ.ಟಿ.ಶಿವೇಗೌಡ | 10–05–50 | 02–11–84 | 21–06–99 | 09–08–2005 | |
| 324. | 483 | ಎಂ.ದೇವಾನಂದ | 01–07–52 | 27–10–84 | 21–06–99 | 09–08–2005 | |
| 325. | 484 | ಸಿ.ಎಸ್.ನರಸಿಂಹಮೂರ್ತಿ | 14–04–51 | 27–10–84 | 21–06–99 | 09–08–2005 | |
| 326. | 486 | ಭಾಸ್ಕರ ವಿಷ್ಣುಭಟ್ | 01–6–53 | 31–10–84 | 21–06–99 | 09–08–2005 | |
| 327. | 488 | ಎಸ್.ಎಸ್.ಬಳ್ಳಾರಿ | 01–06–49 | 30–10–84 | 21–06–99 | 09–08–2005 | |
| 328. | 489 | ಪಿ.ನಿಂಗಪ್ಪ | 13–05–49 | 29–10–84 | 21–06–99 | 09–08–2005 | |
| 329. | 490 | ಸಿ.ಜಿ.ಸಿದ್ದಲಿಂಗಸ್ವಾಮಿ | 17–01–52 | 27–10–84 | 21–06–99 | 09–08–2005 | |
| 330. | 491 | ಸಿ.ಯು.ಚಂದ್ರಶೇಖರಪ್ಪ | 21–09–51 | 05–11–84 | 21–06–99 | 09–08–2005 | |
| 331. | 492 | ಕೆಂಪರಾಜೇಗೌಡ | 01–02–51 | 27–10–84 | 21–06–99 | 09–08–2005 | |
| 332. | 493 | ಪಾಲಾಕ್ಷಯ್ಯ | 10–02–52 | 19–10–84 | 21–06–99 | 09–08–2005 | |
| 333. | 495 | ಬಿ.ಎನ್.ರಾಮಚಂದ್ರ | 07–04–49 | 20–10–84 | 21–06–99 | 19–01–2006 | |
| 334. | 496 | ಕೆ.ಸಿ.ಕೃಷ್ಣಶೆಟ್ಟಿ | 06–06–52 | 27–10–84 | 21–06–99 | 19–01–2006 | |
| 335. | 497 | ಐ. ಯಶೋದಾಬೋಪಣ್ಣ | 09–03–57 | 19–10–84 | 21–06–99 | 19–01–2006 | |
| 336. | 499 | ಎನ್.ಸಿ.ಸಗರೆ | 06–07–49 | 22–10–84 | 21–06–99 | 19–01–2006 | |
| 337. | 500 | ಬಿ.ವಿ.ಬೆಲ್ಲದ್ | 08–04–50 | 02–11–84 | 21–06–99 | 19–01–2006 | |
| 338. | 503 | ಎಂ. ಮಹ್ಮದ್ ಬಷೀರ್ | 09–08–52 | 20–10–84 | 21–06–99 | 19–01–2006 | |
| 339. | 504 | ನಾಜ್ ಉಜ್ರಾಯಾಸ್ಮಿನ್ | 01–01–57 | 19–10–84 | 21–06–99 | 19–01–2006 | |
| 340. | 847 | ಎಂ.ಎಸ್. ಮುಕ್ತಿನಾಥ್ | 04–10–50 | 06–09–76 | 02–05–91 | 22–08–2006 | |
| 341. | 1644 | ರತ್ನಕುಮಾರ್ | 16–12–56 | 22–10–84 | 21–06–99 | 22–08–2006 | |

| ಕ್ರ. ಸಂ. | ಜೇ. ಸಂ | ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ (ಗ್ರೂಪ್ ಬಿ) | ಗ್ರೂಪ್ ಎ ಕಿರಿಯ ಶ್ರೇಣಿ ವೃಂದದಲ್ಲಿ ಬಡ್ತಿ ಹೊಂದಿದ ದಿನಾಂಕ | ಉಪನಿರ್ದೇಶಕ ರಾಗಿ ಬಡ್ತಿ ಹೊಂದಿದ ದಿನಾಂಕ | ಜಾತಿ ಎಸ್.ಸಿ./ ಎಸ್.ಟಿ. |
|---|---|---|---|---|---|---|---|
| 342. | 1660 | ಆರ್.ಸಿ. ಹಲಗತ್ತಿ | 01–04–50 | 27–10–84 | 21–06–99 | 22–08–2006 | |
| 343. | 1668 | ಬಿ.ವಿ. ರಾಜೇಂದ್ರ ಪ್ರಸಾದ್ | 07–02–55 | 20–10–84 | 21–06–99 | 22–08–2006 | |
| 344. | 1687 | ಎಂ.ಆರ್. ಜಗನ್ನಾಥ್ | 02–11–51 | 07–11–84 | 21–06–99 | 22–08–2006 | |
| 345. | 1693 | ಗುಲ್ನಾಜ್ ಅಧೀಬ್ | 23–01–52 | 20–10–84 | 21–06–99 | 22–08–2006 | |
| 346. | 1694 | ಸುನಂದ ಬಿ. ಮೂಗನೂರ | 15–05–54 | 27–10–84 | 21–06–99 | 22–08–2006 | |
| 347. | 1697 | ಬಿ.ಎ.ರಾಜಶೇಖರ್ | 18–09–55 | 19–10–84 | 21–06–99 | 22–08–2006 | |
| 348. | 1698 | ಹೆಚ್. ಬಾಲರಾಜ್ | 26–04–55 | 02–11–84 | 21–06–99 | 22–08–2006 | |
| 349. | 1699 | ನಾಗೇಂದ್ರಕುಮಾರ್ | 13–11–56 | 19–11–84 | 21–06–99 | 17–01–2007 | |
| 350. | 1700 | ನರಸಿಂಹಯ್ಯ | 19–07–58 | 22–10–84 | 21–06–99 | 17–01–2007 | |
| 351. | 1702 | ಜೋಹರ್ ಜಬೀನ್ | 22–05–59 | 18–10–84 | 21–06–99 | 17–01–2007 | |
| 352. | 1703 | ಸಿ.ನಾಗರಾಜನ್ | 14–05–52 | 31–10–84 | 21–06–99 | 17–01–2007 | |
| 353. | 1704 | ಸಿ.ಎ.ರಂಗಯ್ಯ | 12–09–51 | 27–10–84 | 21–06–99 | 28–03–2007 | ಎಸ್.ಸಿ. |
| 354. | 1705 | ಮಂಟೇಲಿಂಗಾಚಾರಿ | 01–06–55 | 02–11–84 | 21–06–99 | 28–03–2007 | |
| 355. | 1708 | ಕೆ.ಶಂಕರಪ್ಪ | 16–02–51 | 22–10–84 | 21–06–99 | 28–03–2007 | |
| 356. | 1709 | ಪಿ.ಹುಚ್ಚಯ್ಯ | 16–12–51 | 2–10–84 | 21–06–99 | 28–03–2007 | ಎಸ್.ಸಿ. |
| 357. | 1710 | ಕೆ.ಗೋಪಾಲ್ | 04–10–54 | 24–10–84 | 21–06–99 | 04–07–2007 | |
| 358. | 1711 | ಆರ್.ಮರಿಮಾದನಾಯಕ್ | 07–10–51 | 31–10–84 | 21–06–99 | 04–07–2007 | |
| 359. | 1713 | ಜಯಕುಮಾರ್.ಎಸ್ | 20–05–59 | 19–10–84 | 21–06–99 | 04–07–2007 | |
| 360. | 1718 | ಎ.ಸೋಮಶೇಖರ್ | 23–05–52 | 31–10–84 | 21–06–99 | 04–07–2007 | |
| 361. | 1723 | ಬಿ.ಸುವರ್ಣದೇವಿ | 06–03–54 | 29–10–84 | 21–06–99 | 04–07–2007 | |
| 362. | 1725 | ಬಿ.ಸಿ.ಬಸವರಾಜಪ್ಪ | 19–02–55 | 26–01–84 | 21–06–99 | 04–07–2007 | |
| 363. | 1727 | ಬಿ.ಎಸ್.ಪರಮೇಶ್ | 01–12–56 | 19–10–84 | 21–06–99 | 04–07–2007 | |
| 364. | 1728 | ಮಲ್ಲಣ್ಣ.ಎಂ. | 14–10–55 | 31–10–84 | 21–06–99 | 04–07–2007 | ಎಸ್.ಸಿ. |
| 365. | 1730 | ಬಿ.ಹೆಚ್.ಬಸವರಾಜು | 10–07–56 | 16–10–84 | 21–06–99 | 04–07–2007 | |
| 366. | 1731 | ಬಿ.ಪಿ.ವೆಂಕಟೇಶ್ | 20–03–53 | 31–10–84 | 21–06–99 | 04–07–2007 | ಎಸ್.ಸಿ. |
| 367. | 1732 | ಸಿ.ಚಾಮೇಗೌಡ | 01–06–55 | 01–02–90 | 21–06–99 | 04–07–2007 | |
| 368. | 1733 | ಪದ್ಮಮ್ಮ.ಪಿ | 24–05–55 | 26–10–90 | 21–06–99 | 04–07–2007 | |
| 369. | 1735 | ಸೈಯದ್ ಸಹೀನ ಬಿಲ್ಕೀಸ್ | 15–04–52 | 29–10–84 | 21–06–99 | 04–07–2007 | |
| 370. | 1736 | ಚಂದ್ರಮ್ಮ.ಜಿ.ಪಿ | 09–02–57 | 22–10–84 | 21–06–99 | 04–07–2007 | |
| 371. | 1737 | ಎಸ್.ಕೆ.ಚನ್ನಬಸಪ್ಪ | 21–06–58 | 22–10–84 | 21–06–99 | 04–07–2007 | |
| 372. | 1738 | ಬೆಳ್ಳಶೆಟ್ಟಿ | 01–06–57 | 03–11–84 | 21–06–99 | 04–07–2007 | |
| 373. | 1739 | ಎಂ.ನೀಲಯ್ಯ | 01–08–57 | 03–11–84 | 21–06–99 | 03–09–2007 | |
| 374. | 1740 | ಗೌಸಿಯಾ ಬೇಗಂ | 15–11–51 | 20–10–84 | 21–06–99 | 03–09–2007 | |
| 375. | 1742 | ವರದಾ ನಾಯಕ್ | 01–10–57 | 29–10–84 | 21–06–99 | 03–09–2007 | |
| 376. | 1745 | ಹೆಚ್.ಎನ್.ನಾಗರಾಜು | 07–05–52 | 20–10–84 | 21–06–99 | 03–09–2007 | |
| 377. | 1747 | ಎಸ್.ಜಿ.ಸತ್ಯನಾರಾಯಣ | 30–08–51 | 29–10–84 | 21–06–99 | 25–10–2007 | |
| 378. | 1748 | ಸಿ.ಆಂಜಿನೇಯ ರೆಡ್ಡಿ | 10–08–52 | 22–10–84 | 21–06–99 | 11–12–2007 | |

| ಕ್ರ. ಸಂ. | ಜೇ. ಸಂ | ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ (ಗ್ರೂಪ್ ಬಿ) | ಗ್ರೂಪ್ ಎ ಕಿರಿಯ ಶ್ರೇಣಿ ವೃಂದದಲ್ಲಿ ಬಡ್ತಿ ಹೊಂದಿದ ದಿನಾಂಕ | ಉಪನಿರ್ದೇಶಕರಾಗಿ ಬಡ್ತಿ ಹೊಂದಿದ ದಿನಾಂಕ | ಜಾತಿ ಎಸ್.ಸಿ./ ಎಸ್.ಟಿ. |
|---|---|---|---|---|---|---|---|
| 379. | 1749 | ಅಪ್ಪಾಜಯ್ಯ | 07–06–51 | 20–10–84 | 21–06–99 | 11–12–2007 | |
| 380. | 1751 | ಆರ್.ನಾಗಪುಷ್ಪ | 12–06–59 | 02–11–84 | 21–06–99 | 11–12–2007 | ಎಸ್.ಸಿ. |

**ಹೆಚ್.ಟಿ. ಜಯರಾಂ**

ಪಿ.ಆರ್.481

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ, (ಸೇವೆಗಳು–1,2)

## ಕಂದಾಯ ಇಲಾಖೆ

## ಸೇರ್ಪಡೆ

**ನಂ.ಕಂ.ಇ.32 ವಿಮಕ 08, ಬೆಂಗಳೂರು, ದಿನಾಂಕ:17ನೇ ಫೆಬ್ರವರಿ, 2009**

ಅಧಿಸೂಚನೆ ಸಂಖ್ಯೆ: ಕಂಇ 32 ವಿಮಕ 2008, ದಿನಾಂಕ:30.01.2009ರಲ್ಲಿನ ಕ್ರಮ ಸಂಖ್ಯೆ: 2ರ ನಂತರ ಈ ಕೆಳಕಂಡಂತೆ ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

| ಕ್ರಮ ಸಂಖ್ಯೆ | ಇಲಾಖಾ ವ್ಯಾಪ್ತಿಯಲ್ಲಿ ಬರುವ ಸಾರ್ವಜನಿಕ ಪ್ರಾಧಿಕಾರದ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 2ಎ | ಕಂದಾಯ ಇಲಾಖೆ ಸಚಿವಾಲಯ | ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯ, ಬೆಂಗಳೂರು. | ತಹಶೀಲ್ದಾರ್/ ಪೀಠಾಧಿಕಾರಿ, ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯ, ಬೆಂಗಳೂರು. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ. |
| 2ಬಿ | ಕಂದಾಯ ಇಲಾಖೆ ಸಚಿವಾಲಯ | ವಿಶೇಷಾಧಿಕಾರಿ, ಆಡಿಟ್ ಶಾಖೆ. | ಆಡಿಟ್ ಅಧಿಕಾರಿ, ಆಡಿಟ್ ಶಾಖೆ. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ನರಸಿಂಹಲು**

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸಮನ್ವಯ)

**ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005 ರ ಸೆಕ್ಷನ್ 4 (i) (b) (i) (ii) ಮತ್ತು (iii) ರಂತೆ ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯದ ಕಾರ್ಯ ವಿಧಾನ ಮತ್ತು ಅಧಿಕಾರಿಗಳು/ನೌಕರರ ಕರ್ತವ್ಯ ಮತ್ತು ಜವಾಬ್ದಾರಿಗಳು**

ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯವು ಕೆಳಕಂಡ ಸಾಮಾಜಿಕ ಭದ್ರತಾ ಯೋಜನೆಗಳ ಅನುಷ್ಠಾನ ಹಾಗೂ ಮೇಲ್ವಿಚಾರಣೆ ಮಾಡುತ್ತದೆ.

1) ಇಂದಿರಾ ಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ವೇತನ,
2) ಸಂಧ್ಯಾ ಸುರಕ್ಷಾ ಯೋಜನೆ,
3) ನಿರ್ಗತಿಕ ವಿಧವಾ ವೇತನ,
4) ಅಂಗವಿಕಲ ವೇತನ,
5) ರಾಷ್ಟ್ರೀಯ ಕುಟುಂಬ ನೆರವು ಯೋಜನೆ,
6) ಅಂತ್ಯ ಸಂಸ್ಕಾರ ಯೋಜನೆ,
7) ಆದರ್ಶ ವಿವಾಹ ಯೋಜನೆ
8) ಆಮ್ ಆದ್ಮಿ ಬೀಮಾ ಯೋಜನೆ,
9) ಅನ್ನಪೂರ್ಣ ಯೋಜನೆ.

ಜಿಲ್ಲಾಧಿಕಾರಿಗಳು ಮೇಲ್ಕಂಡ ಎಲ್ಲಾ ಯೋಜನೆಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಜಿಲ್ಲಾ ಮಟ್ಟದ ಉಸ್ತುವಾರಿ ಅಧಿಕಾರಿಯಾಗಿರುತ್ತಾರೆ. ತಾಲ್ಲೂಕಿನ ತಹಸೀಲ್ದಾರರು ಮೇಲ್ಕಂಡ ಎಲ್ಲಾ ಯೋಜನೆಗಳ ಮಂಜೂರಾತಿ ಪ್ರಾಧಿಕಾರಿಯಾಗಿರುತ್ತಾರೆ,

ಯೋಜನೆಗಳ ವಿವರಗಳನ್ನು ಅನುಬಂಧ–1 ರಲ್ಲಿ ಲಗತ್ತಿಸಿದೆ.

**ರಾಜ್ಯಮಟ್ಟದ ಕಛೇರಿ**

1) ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ, ಕಂದಾಯ ಇಲಾಖೆ (ಜಿಲ್ಲಾಧಿಕಾರಿಗಳ ಶ್ರೇಣಿ–24450–31800)

ಅ) ನಿರ್ದೇಶಕರು ಇಲಾಖಾ ಮುಖ್ಯಸ್ಥರಾಗಿದ್ದು ಯೋಜನೆಗಳ ಸಮರ್ಪಕವಾದ ಅನುಷ್ಠಾನ ಹಾಗೂ ವಿವಿಧ ಯೋಜನೆಗಳಿಗಾಗಿ ಸರ್ಕಾರ ನಿಗದಿ ಪಡಿಸಿರುವ ಸಂಚಿತ ನಿಧಿಯನ್ನು ನಿಯಂತ್ರಿಸುವ ಅಧಿಕಾರ ಹೊಂದಿರುತ್ತಾರೆ.

ಆ) ಕೇಂದ್ರ ಸರ್ಕಾರದ ಅನುದಾನವನ್ನು ನಿಯಮಿತವಾಗಿ ಸದುಪಯೋಗ ಪಡಿಸಿಕೊಳ್ಳುವುದು ಹಾಗೂ ಈ ಬಗ್ಗೆ ಕೇಂದ್ರ ಸರ್ಕಾರಕ್ಕೆ ಕಾಲಕಾಲಕ್ಕೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿ ಅನುದಾನವನ್ನು ಬಿಡುಗಡೆಗೊಳಿಸುವುದು.

ಇ) ಯೋಜನೆಗಳ ಸಫಲತೆಯ ಬಗ್ಗೆ ಭೌತಿಕ ಹಾಗೂ ಆರ್ಥಿಕ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.

ಈ) ಸಾಮಾಜಿಕ ಭದ್ರತಾ ಯೋಜನೆಗಳಿಗೆ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಗಳಿಗೆ ಸಲಹೆಗಳನ್ನು ನೀಡುವ ಅಧಿಕಾರ ಹೊಂದಿರುತ್ತಾರೆ.

ಉ) ಸಾಮಾಜಿಕ ಭದ್ರತಾ ಯೋಜನೆಗಳ ಅನುಷ್ಠಾನದ ಗಣಕೀಕರಣ ಹಾಗೂ ಫಲಾನುಭವಿಗಳ ವಿದ್ಯುನ್ಮಾನ ಮಾಹಿತಿಯ ನಿರ್ವಹಣೆ.

ಊ) ಕರ್ನಾಟಕ ಆರ್ಥಿಕ ಸಂಹಿತೆ, ಸಾದಿಲ್ವಾರು ವೆಚ್ಚದ ಕೈಪಿಡಿ, ಆರ್ಥಿಕ ಅಧಿಕಾರದ ಕೈಪಿಡಿ, ವಿಶೇಷ ಆರ್ಥಿಕ ಅಧಿಕಾರ ಮತ್ತು ನಿಯಮಗಳಡಿಯಲ್ಲಿ ಆರ್ಥಿಕ ಅಧಿಕಾರ ಚಲಾಯಿಸಲು ಅಧಿಕಾರ ಹೊಂದಿರುತ್ತಾರೆ,

2) ಪೀಠಾಧಿಕಾರಿಗಳು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ, ಕಂದಾಯ ಇಲಾಖೆ.(ವೇತನ ಶ್ರೇಣಿ–11400–21600)

ಸಾಮಾಜಿಕ ಭದ್ರತಾ ಯೋಜನೆಗಳ ಪರಿಣಾಮಕಾರಿಯಾದ ಅನುಷ್ಠಾನಕ್ಕೆ ಸಂಬಂಧಿಸಿದಂತೆ ನಿರ್ದೇಶನಾಲಯದ ಕೆಲಸ ಕಾರ್ಯಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ.

3) ಪ್ರಥಮ ದರ್ಜೆ ಸಹಾಯಕರು (7275–13350)

ಇವರುಗಳು ನಿರ್ದೇಶನಾಲಯದ ಕಛೇರಿಯಲ್ಲಿ ಸಾಮಾಜಿಕ ಭದ್ರತಾ ಯೋಜನೆಗಳ ಆಡಳಿತ, ಲೆಕ್ಕ ಪತ್ರ ಹಾಗೂ ಇತರೆ ವಿಷಯಕ್ಕೆ ಸಂಬಂಧಿಸಿದಂತೆ ಕಾರ್ಯ ನಿರ್ವಹಿಸುವರು.

**4) ಜಿಲ್ಲಾಮಟ್ಟದಲ್ಲಿ:**

I) ಸಾಂಖ್ಯಿಕ ಅಧಿಕಾರಿಗಳು (10,000–18150)

ಜಿಲ್ಲಾಮಟ್ಟದಲ್ಲಿ ಸಾಮಾಜಿಕ ಭದ್ರತಾ ಯೋಜನೆಗಳ ನಿರ್ವಹಣೆ, ಯೋಜನೆಗಳ ಬಗ್ಗೆ ಮಾಹಿತಿಯ ಕ್ರೋಢೀಕರಣ ಹಾಗೂ ಹಣ ಬಳಕೆ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.

**5) ತಾಲ್ಲೂಕು ಮಟ್ಟದಲ್ಲಿ:**

I) ಶಿರಸ್ತೆದಾರರು: ಸಾಮಾಜಿಕ ಭದ್ರತಾ ಯೋಜನೆಗಳು:

ತಾಲ್ಲೂಕು ಮಟ್ಟದಲ್ಲಿ ಸಾಮಾಜಿಕ ಭದ್ರತಾ ಯೋಜನೆಗಳ ನಿರ್ವಹಣೆ, ಯೋಜನೆಗಳ ಬಗ್ಗೆ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಎಲ್ಲಾ ಕೆಲಸ ಕಾರ್ಯಗಳಲ್ಲಿ ತಾಲ್ಲೂಕಿನ ತಹಸೀಲ್ದಾರರಿಗೆ ನೆರವಾಗುವುದು.

II) ಪ್ರಥಮ ದರ್ಜೆ ಸಹಾಯಕರು: ಸಾಮಾಜಿಕ ಭದ್ರತಾ ಯೋಜನೆಗಳು:

ತಾಲ್ಲೂಕು ಮಟ್ಟದಲ್ಲಿ ಸಾಮಾಜಿಕ ಭದ್ರತಾ ಯೋಜನೆಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಎಲ್ಲಾ ಕೆಲಸಗಳಲ್ಲಿ ಶಿರಸ್ತೆದಾರರಿಗೆ ನೆರವಾಗುವುದು.

ನಿರ್ದೇಶಕರು,
ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ,
ಕಂದಾಯ ಇಲಾಖೆ.

**ಅನುಬಂಧ–1**

**(1) ಇಂದಿರಾ ಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ವೇತನ ಯೋಜನೆ**

ಚಾಲ್ತಿಯಲ್ಲಿದ್ದ ರಾಷ್ಟ್ರೀಯ ವೃದ್ಧಾಪ್ಯ ವೇತನದ ನಿಯಮಗಳನ್ನು ಬದಲಾಯಿಸಿ 19.11.2007ರಿಂದ ಕೇಂದ್ರ ಸರ್ಕಾರವು ಇಂದಿರಾ ಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ವೇತನ ಯೋಜನೆಯನ್ನು ಜಾರಿಗೆ ತಂದಿದೆ. ಈ ಯೋಜನೆಯ ಅನ್ವಯ.

1. ಫಲಾನುಭವಿಗಳು 65 ವರ್ಷ ಹಾಗೂ ಮೇಲ್ಪಟ್ಟ ವಯಸ್ಸುಳ್ಳವರಾಗಿರಬೇಕು. ಅವರು ಬಡತನ ರೇಖೆಗಿಂತ (ಬಿಪಿಎಲ್) ಕೆಳಗಡೆ ಇರಬೇಕು.
2. ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯಿತಿ ರಾಜ್ ಮಂತ್ರಾಲಯವು, ಬಡತನ ರೇಖೆಗಿಂತ ಕೆಳಗಿರುವವರನ್ನು ಗುರುತಿಸಲು ಕುಟುಂಬದ ಶೈಕ್ಷಣಿಕ, ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಗಳ ಬಗ್ಗೆ 13 ಅಂಶಗಳನ್ನು ನಿಗದಿಪಡಿಸಿದೆ. ಪ್ರತಿಯೊಂದು ಅಂಶಕ್ಕೆ 0–4 ಅಂಕಗಳನ್ನು ನಿಗದಿಪಡಿಸಲಾಗಿದೆ. ಅದರಂತೆ 26 ಅಂಕಗಳು ಅಥವಾ ಅದಕ್ಕಿಂತ ಕಡಿಮೆ ಅಂಕಗಳನ್ನು ಪಡೆದ ಕುಟುಂಬಗಳನ್ನು ಬಡತನದ ರೇಖೆಗಿಂತ ಕೆಳಗಿದೆ ಎಂದು ಪರಿಗಣಿಸುವುದು.
3. ಅಂತಹ ವ್ಯಕ್ತಿಯು ವಿಧವಾ ವೇತನ, ಅಂಗವಿಕಲ ವೇತನ, ಸಂಧ್ಯಾ ಸುರಕ್ಷಾ ಯೋಜನೆಯಡಿ ಯಾವುದೇ ತರಹದ ಪಿಂಚಣಿ ಇತ್ಯಾದಿಗಳನ್ನು ಸಾರ್ವಜನಿಕ ಅಥವಾ ಖಾಸಗಿ ಮೂಲಗಳಿಂದ ಪಡೆಯುತ್ತಿರಬಾರದು.
4. ಮಾಸಿಕ ರೂ.400ಗಳನ್ನು ಮಾಸಾಶನವನ್ನು ನೀಡಲಾಗುತ್ತದೆ ಹಾಗೂ ಇಂತಹಾ ವ್ಯಕ್ತಿಯು ಬೇರೆ ಯಾವುದೇ ಪಿಂಚಣಿಯನ್ನು ಪಡೆಯುತ್ತಿರಬಾರದೆಂದು ನಿಬಂಧನೆಯನ್ನು ಮಾಡಲಾಗಿದೆ.
5. ಫಲಾನುಭವಿಗಳಿಗೆ ಗಂಡು ಮಕ್ಕಳು ಇದ್ದಾಗ್ಯಾ ಅವರು ಫಲಾನುಭವಿಗಳನ್ನು ಪೋಷಿಸದೆ ಇದ್ದಲ್ಲಿ ಈ ಮಾಸಾಶನವನ್ನು ಪಡೆಯಬಹುದಾಗಿದೆ.
6. ಜನನ ಪ್ರಮಾಣ ಪತ್ರ, ವೈದ್ಯಕೀಯ ದೃಢೀಕರಣ ಪತ್ರ ಅಥವಾ ಭಾರತ ಚುನಾವಣಾ ಆಯೋಗವು ನೀಡಿರುವ ಮತದಾರರ ಗುರುತಿನ ಚೀಟಿಯಲ್ಲಿರುವ ಜನ್ಮ ದಿನಾಂಕವು ವಯಸ್ಸಿಗೆ ಸಂಬಂಧಿಸಿದ ದಾಖಲೆಯಾಗಿರುತ್ತದೆ.

**(2) ನಿರ್ಗತಿಕ ವಿಧವಾ ವೇತನ ಯೋಜನೆ**

ಹದಿನೆಂಟು ವರ್ಷಕ್ಕಿಂತ ಹೆಚ್ಚು ವಯಸ್ಸಿನ ನಿರ್ಗತಿಕ ವಿಧವೆಯರಿಗೆ ವಿಧವಾ ವೇತನವನ್ನು ಸರ್ಕಾರದ ಆದೇಶದ ಮೇರೆಗೆ 1ನೇ ಏಪ್ರಿಲ್ 1984ರಿಂದ ಕಾರ್ಯಗತ ಮಾಡಲಾಗಿದೆ.

1. ನಿರ್ಗತಿಕ ವಿಧವೆ ಅಂದರೆ, ಪತಿಯು ಜೀವಿಸಿಲ್ಲದ ಅಥವಾ ಕಾನೂನು ರೀತ್ಯಾ ಮೃತಪಟ್ಟಿರುವನೆಂದು ಭಾವಿಸುವವನ ಪತ್ನಿ ಮತ್ತು ಅವಳ ಸಂಬಂಧಿಕರ ಆಶ್ರಯವಿಲ್ಲದ ಮತ್ತು 6000 ರೂ.ಗಳಿಗೆ ಮೀರದ (ಆರು ಸಾವಿರ ರೂಪಾಯಿಗಳು) ವಾರ್ಷಿಕ ಆದಾಯವನ್ನು ಹೊಂದಿಲ್ಲದಿರುವ ಒಬ್ಬ ಸ್ತ್ರೀ.
2. ಅರ್ಜಿದಾರಳು ಅಥವಾ ಆಕೆಯ ಮರಣ ಹೊಂದಿದ ಪತಿಯು ಅರ್ಜಿ ದಿನಾಂಕದಿಂದ ಹಿಂದಿನ ನಿರಂತರ ಮೂರು ವರ್ಷಗಳ ಅವಧಿಗೆ ಕಡಿಮೆ ಇಲ್ಲದಂತೆ ಈ ರಾಜ್ಯದ ನಿವಾಸಿಯಾಗಿರಬೇಕು.
3. ವಿಧವಾ ವೇತನದ ಮೊಬಲಗು ತಿಂಗಳಿಗೆ ರೂ. 400/–
4. ವಿಧವಾ ವೇತನಕ್ಕಾಗಿ ಸಲ್ಲಿಸುವ ಅರ್ಜಿಯು ಗೊತ್ತುಪಡಿಸಿದ ನಮೂನೆಯಲ್ಲಿರಬೇಕು ಮತ್ತು ಅದನ್ನು ಸಂಬಂಧಪಟ್ಟ ತಾಲ್ಲೂಕಿನ ತಹಶೀಲ್ದಾರರಿಗೆ ಸಲ್ಲಿಸಬೇಕು. ಬೇರೆ ಪಿಂಚಣಿ ಪಡೆಯುತ್ತಿರುವವರು ವಿಧವಾ ಅರ್ಹರಾಗುವುದಿಲ್ಲ.
5. ಮೃತರಾಗುವವರೆಗೆ ಅಥವಾ ಪುನರ್ವಿವಾಹವಾಗುವವರೆಗೆ ಅಥವಾ ಉದ್ಯೋಗ ಪಡೆದು ವಾರ್ಷಿಕ ಆದಾಯ ರೂ. 6000 ಕ್ಕಿಂತ ಹೆಚ್ಚಿಗೆ ಪಡೆಯುವವರೆಗೆ ವಿಧವೆಯರ ವಿಧವಾ ವೇತನವನ್ನು ಪಡೆಯಬಹುದು.
6. ಜನನ ಪ್ರಮಾಣ ಪತ್ರ, ವೈದ್ಯಕೀಯ ದೃಢೀಕರಣ ಪತ್ರ ಅಥವಾ ಭಾರತ ಚುನಾವಣಾ ಆಯೋಗವು ನೀಡಿರುವ ಮತದಾರರ ಗುರುತಿನ ಚೀಟಿಯಲ್ಲಿರುವ ಜನ್ಮ ದಿನಾಂಕವು ವಯಸ್ಸಿಗೆ ಸಂಬಂಧಿಸಿದ ದಾಖಲೆಯಾಗಿರುತ್ತದೆ.

2008–09ನೇ ಸಾಲಿನಿಂದ ನಿರ್ಗತಿಕ ವಿಧವೆಗೆ 18 ವರ್ಷಕ್ಕಿಂತ ಮೇಲ್ಪಟ್ಟ ಗಂಡು ಮಕ್ಕಳಿದ್ದು ಆಕೆಗೆ ಆಸರೆಯಾಗಿಲ್ಲಾ ಹಾಗೂ ಜೀವನ ನಿರ್ವಹಣೆಗೆ ಬೇರೆ ಯಾವುದೇ ರೀತಿಯ ಆಸರೆಗಳನ್ನು ಆಧಾರಗಳನ್ನು ಹೊಂದಿರುವುದಿಲ್ಲಾ ಎಂಬುದು ಲಿಖಿತ ರೂಪದಲ್ಲಿ ದಾಖಲಿಸುವ ಷರತ್ತಿಗೆ ಒಳಪಟ್ಟು ವಿಧವಾ ವೇತನವನ್ನು ಮಂಜೂರು ಮಾಡಬಹುದಾಗಿದೆ.

**(3) ಅಂಗವಿಕಲರ ಮಾಸಾಶನ ಯೋಜನೆ**

ಅಂಗವಿಕಲರನ್ನು ಸಮಾಜದ ಮುಖ್ಯವಾಹಿನಿಗೆ ತರಲು ಹಾಗೂ ಅವರಿಗೆ ಆರ್ಥಿಕ ಭದ್ರತೆಯನ್ನೊದಗಿಸಲು ಕೆಳಕಂಡ ಅಂಗವಿಕಲತೆಯುಳ್ಳ,ರೂ.6000/–ಕ್ಕಿಂತ ಕಡಿಮೆ ಕುಟುಂಬದ ವಾರ್ಷಿಕ ವರಮಾನವುಳ್ಳ ಅಂಗವಿಕಲತೆಯೊಂದಿಗೆ ಹುಟ್ಟಿದ ಮಗು ಮತ್ತು ಅಪಘಾತದಿಂದ ಅಂಗವಿಕಲತೆ ಉಂಟಾದ ವ್ಯಕ್ತಿಗಳು ಈ ಮಾಸಾಶನಕ್ಕೆ ಅರ್ಹರಾಗಿರುತ್ತಾರೆ.

ಅಂಗವಿಕಲ ವ್ಯಕ್ತಿಗಳ (ಸಮಾನ ಅವಕಾಶ ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ), ಅಧಿನಿಯಮ 1995 ಅಧ್ಯಾಯ 1 ಭಾಗ 2(4)(ಟಿ) ರಲ್ಲಿ ಅಂಗವಿಕಲ ವ್ಯಕ್ತಿ ಎಂದರೆ ವೈದ್ಯಕೀಯ ಪ್ರಾಧಿಕಾರವು ಪ್ರಮಾಣೀಕರಿಸಿದ ರೀತಿಯಲ್ಲಿ ಯಾವುದೇ ಅಂಗವಿಕಲತೆಯಿಂದ ಶೇಕಡಾ 40% ಕ್ಕಿಂತ ಕಡಿಮೆ ಇರದಂತೆ ಅದರಿಂದ ಬಳಲುತ್ತಿರುವ ವ್ಯಕ್ತಿ .

ಅಂಗವಿಕಲತೆ ಎಂದರೆ–

ಅ) ಅಂಧತ್ವ

ಆ) ಮಂದದೃಷ್ಟಿ

ಇ) ಕುಷ್ಠರೋಗ ನಿವಾರಿತರಾದ

ಈ) ಶ್ರವಣದೋಷವುಳ್ಳವರು

ಉ) ಚಲನವಲನ ಅಂಗವಿಕಲತೆ

ಊ) ಬುದ್ಧಿಮಾಂದ್ಯತೆ

ಋ) ಮಾನಸಿಕ ಅಸ್ವಸ್ಥತೆ

ಶೇಕಡಾ 40% ಕ್ಕಿಂತ ಮೇಲ್ಪಟ್ಟ ಅಂಗವಿಕಲತೆ ಹೊಂದಿರುವ ಅಂಗವಿಕಲರಿಗೆ ನೀಡುವ ಮಾಸಾಶನದ ಮೊತ್ತ ತಿಂಗಳಿಗೆ ರೂ.400/-

2008-09 ನೇ ಸಾಲಿನಿಂದ ಶೇಕಡಾ 75% ರಷ್ಟು ಹಾಗೂ ಅದಕ್ಕಿಂತ ಹೆಚ್ಚು ಅಂಗವಿಕಲತೆಯುಳ್ಳ ವ್ಯಕ್ತಿಗಳು ವೈದ್ಯಕೀಯ ಮಂಡಳಿಯಿಂದ ದೃಢೀಕರಣ ಪತ್ರವನ್ನು ಪಡೆದಿದ್ದರೆ, ಸದರಿ ಪ್ರಮಾಣ ಪತ್ರದ ಆಧಾರದ ಮೇಲೆ ರೂ.1000/- ಮಾಸಿಕ ವೇತನ ನೀಡಲಾಗುವುದು.

### (4) ಅನ್ನಪೂರ್ಣ ಯೋಜನೆ

ನಿರ್ಗತಿಕ ವ್ಯಕ್ತಿಗಳಿಗೆ ಆಹಾರ ಭದ್ರತೆಯನ್ನೊದಗಿಸುವ ಸಲುವಾಗಿ ಕೇಂದ್ರ ಸರ್ಕಾರವು, ರಾಜ್ಯ ಸರ್ಕಾರದ ಸಹಯೋಗದೊಂದಿಗೆ ಅನ್ನಪೂರ್ಣ ಯೋಜನೆಯನ್ನು ಜಾರಿಗೆ ತಂದಿದೆ.

ನಿಭಂದನೆಗಳು:

1. 65 ವರ್ಷ ಅಥವಾ ಅದಕ್ಕಿಂತ ಮೇಲ್ಪಟ್ಟ ನಿರ್ಗತಿಕ ವ್ಯಕ್ತಿಗಳು ಯೋಜನೆಯಡಿ ಫಲಾನುಭವಿಗಳಾಗಿರುತ್ತಾರೆ.
2. ಯೋಜನೆಯ ಅನುಸಾರ ಫಲಾನುಭವಿಗಳಿಗೆ 10 ಕಿಲೋ ಗ್ರಾಂ ಅಕ್ಕಿಯನ್ನು ಪ್ರತಿ ತಿಂಗಳು ಉಚಿತವಾಗಿ ವಿತರಿಸಲಾಗುವುದು.
3. ಈಗಾಗಲೇ ಇತರೇ ಸಾಮಾಜಿಕ ಭದ್ರತಾ ಯೋಜನೆಯಡಿ ಫಲಾನುಭವಿಗಳಾಗಿದ್ದರೆ ಈ ಯೋಜನೆಯಡಿ ಅರ್ಹರಾಗುವುದಿಲ್ಲ.

### (5) ಸಂಧ್ಯಾ ಸುರಕ್ಷಾ ಯೋಜನೆ

65 ವರ್ಷದ ಅಥವಾ ಮೇಲ್ಪಟ್ಟ ವಯಸ್ಸಿನ ಹಿರಿಯ ಜೀವಿಗಳನ್ನು ಆರ್ಥಿಕ ಸಂಕಷ್ಟದಿಂದ ಪಾರು ಮಾಡುವ ದಿಶೆಯಲ್ಲಿ ಮಾಸಿಕ ರೂ.400/- ದಿನಾಂಕ:02.07.2007 ರಿಂದ ಮಾಸಾಶನವನ್ನು ಪ್ರಾರಂಭಿಸಲಾಗಿದೆ.

ಕೆಳಕಂಡ ವ್ಯಕ್ತಿಗಳು ಈ ಮಾಸಾಶನವನ್ನು ಅರ್ಹರಾಗಿರುತ್ತಾರೆ.

(ಅ) ಸಣ್ಣ ರೈತರು

(ಆ) ಅತೀ ಸಣ್ಣ ರೈತರು

(ಇ) ಕೃಷಿ ಕಾರ್ಮಿಕರು

(ಈ) ನೇಕಾರರು

(ಉ) ಮೀನುಗಾರರು

(ಊ) ಅಸಂಘಟಿತ ವಲಯದ ಕಾರ್ಮಿಕರು, ಆದರೆ ಇದು "Building and other Construction workers" (Regulation of Employment and Conditions of Services) Act,1996 ಅಡಿಯಲ್ಲಿ ಬರುವ ವ್ಯಕ್ತಿಗಳಿಗೆ ಅನ್ವಯಿಸುವುದಿಲ್ಲ ಮತ್ತು ಅದರಡಿ ಮಾಸಾಶನ ಪಡೆಯುವವರು ಈ ಯೋಜನೆಗೆ ಅರ್ಹರಾಗಿರುವುದಿಲ್ಲ.

**ನಿಬಂಧನೆಗಳು:**

1. ಪತಿ, ಪತ್ನಿಯ ಸಂಯೋಜಿತ ವಾರ್ಷಿಕ ಆದಾಯ ರೂ.20,000/-ಕ್ಕಿಂತ ಹೆಚ್ಚಿಗೆ ಇರಕೂಡದು.
2. ಫಲಾನುಭವಿಗಳು ಪತಿ ಅಥವಾ ಪತ್ನಿಯ ಸಂಯೋಜಿತ ಠೇವಣಿ ಮೌಲ್ಯ ರೂ.10,000ಕ್ಕಿಂತ ಹೆಚ್ಚಿಗೆ ಇರಬಾರದು.
3. ಯಾವುದೇ ರೀತಿಯ ಪಿಂಚಣಿಯನ್ನು ಸಾರ್ವಜನಿಕ/ಖಾಸಗಿ ಮೂಲದಿಂದ ಪಡೆಯುತ್ತಿರಬಾರದು.
4. ಫಲಾನುಭವಿಗಳಿಗೆ ಗಂಡು ಮಕ್ಕಳು ಇದ್ದರೂ ಸಹ ಇವರುಗಳು ಫಲಾನುಭವಿಗಳನ್ನು ಪೋಷಿಸದೆ ಇದ್ದಲ್ಲಿ ಈ ಯೋಜನೆಯಡಿ ಮಾಸಾಶನಕ್ಕೆ ಅರ್ಹರಾಗಿರುತ್ತಾರೆ.
5. ಜನನ ಪ್ರಮಾಣ ಪತ್ರ, ವೈದ್ಯಕೀಯ ದೃಢೀಕರಣ ಪತ್ರ ಅಥವಾ ಭಾರತ ಚುನಾವಣಾ ಆಯೋಗವು ನೀಡಿರುವ ಮತದಾರರ ಗುರುತಿನ ಚೀಟಿಯಲ್ಲಿರುವ ಜನ್ಮ ದಿನಾಂಕವು ವಯಸ್ಸಿಗೆ ಸಂಬಂಧಿಸಿದ ದಾಖಲೆಯಾಗಿರುತ್ತದೆ.

### (6) ಆದರ್ಶ ವಿವಾಹ ಯೋಜನೆ

ರಾಜ್ಯದಲ್ಲಿ ಸರಳ ಸಾಮೂಹಿಕ ವಿವಾಹಗಳನ್ನು ಜನಪ್ರಿಯ ಗೊಳಿಸಲು ಕನಿಷ್ಠ 25 ವಿವಾಹಗಳು ನಡೆದ ಕಾರ್ಯಕ್ರಮಕ್ಕೆ ಪ್ರತಿ ವಿವಾಹಕ್ಕೆ 2 ವರ್ಷದ ಠೇವಣಿ ರೂಪದಲ್ಲಿ ರೂ.10,000/- ಪ್ರೋತ್ಸಾಹ ಧನ ನೀಡಲು ದಿನಾಂಕ:02.02.2007 ರಿಂದ ಯೋಜನೆಯನ್ನು ರೂಪಿಸಲಾಗಿದೆ.

**ನಿಬಂಧನೆಗಳು:**

1. ಇಂತಹಾ ಕಾರ್ಯಕ್ರಮದಲ್ಲಿ ವಿವಾಹವಾಗುವ ಜೋಡಿಯಲ್ಲಿ ವಧುವಿನ ಹೆಸರಲ್ಲಿ ರೂ.10,000/-ಗಳನ್ನು 2 ವರ್ಷಗಳ ನಿಶ್ಚಿತ ಠೇವಣಿಯಲ್ಲಿ ಇಡಲಾಗುವುದು.
2. ಅಂತರ್ ಜಾತಿ ವಿವಾಹಗಳಿಗೆ ಈ ಯೋಜನೆಯಲ್ಲಿ ಅವಕಾಶವಿದ್ದು ಎರಡು ಪ್ರೋತ್ಸಾಹ ಧನಗಳನ್ನು ಒಟ್ಟಿಗೆ ನೀಡಲಾಗುವುದು.
3. ಸಾಮೂಹಿಕ ವಿವಾಹಗಳ ಸಂಘಟನಾಕಾರರಿಗೆ ಪ್ರತಿ ಜೋಡಿಗೆ ರೂ.100/-ರಂತೆ ಪ್ರೋತ್ಸಾಹ ಧನ ನೀಡಲಾಗುವುದು.
4. ವಿವಾಹಕ್ಕೆ ಅರ್ಹವಾದ ವಯಸ್ಸಿನವರಾಗಿದ್ದು (ಕನಿಷ್ಠ ವಯೋಮಿತಿ) ಈ ಮೊದಲೇ ಮದುವೆಯಾಗಿ ಜೀವಂತ ಪತಿ ಅಥವಾ ಪತ್ನಿ ಇರಬಾರದು.
5. ಪ್ರೋತ್ಸಾಹ ಧನ ಪಡೆಯಲು ವಿವಾಹವನ್ನು ನೋಂದಣಿ ಮಾಡಿಸುವುದು ಕಡ್ಡಾಯವಾಗಿದೆ.
6. ಪ್ರತಿ ಅರ್ಜಿಯ ಜೊತೆಯಲ್ಲಿ ಅಗತ್ಯವಿರುವ ಪ್ರಮಾಣ ಪತ್ರಗಳು, ವಿವಾಹದ ಭಾವ ಚಿತ್ರದ ಪಾಸಿಟಿವ್ ಮತ್ತು ನೆಗೆಟಿವ್ ಮುಂತಾದವುಗಳನ್ನು ಲಗತ್ತಿಸಬೇಕು.
7. ವಿವಾಹ ಮುಗಿದ ಒಂದು ವಾರದಲ್ಲಿ ಹಣವನ್ನು ವಧುವಿಗೆ ಅನುಕೂಲಕರವಾದ ಬ್ಯಾಂಕ್ ಶಾಖೆಯಲ್ಲಿ ನಿಶ್ಚಿತ ಠೇವಣಿಯಲ್ಲಿ ವಧುವಿನ ಹೆಸರಿನಲ್ಲಿ ಇಟ್ಟು ವಧುವಿಗೆ ರಸೀದಿಯನ್ನು ನೀಡಲಾಗುವುದು.

ಸರಳ ಸಾಮೂಹಿಕ ವಿವಾಹ ಯೋಜನೆಯನ್ನು ಜನಪ್ರಿಯಗೊಳಿಸಲು ಹಾಗೂ ಆದರ್ಶ ವಿವಾಹ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು 2008-09ನೇ ಸಾಲಿನಿಂದ ಗ್ರಾಮಾಂತರ ಮತ್ತು ಹೋಬಳಿ ಮಟ್ಟದಲ್ಲಿ ಏರ್ಪಡಿಸುವ ಸಾಮೂಹಿಕ ವಿವಾಹಗಳಲ್ಲಿ ಕನಿಷ್ಠ 10 ಜೋಡಿಗಳು ಹಾಗೂ ಪಟ್ಟಣ ಮತ್ತು ನಗರ ಪ್ರದೇಶದಲ್ಲಿ ನಡೆಯುವ ಸಾಮೂಹಿಕ ವಿವಾಹಗಳಲ್ಲಿ ಪ್ರಸ್ತುತ ನಿಗದಿಪಡಿಸಿರುವಂತೆ ಕನಿಷ್ಠ 25 ಜೋಡಿಗಳು ಇದ್ದಲ್ಲಿ ಪ್ರೋತ್ಸಾಹ ಧನ ನೀಡಲಾಗುವುದು ಎಂದು ಸರ್ಕಾರ ಆದೇಶ ಹೊರಡಿಸಿದೆ.

### (7) ರಾಷ್ಟ್ರೀಯ ಕುಟುಂಬ ನೆರವು ಯೋಜನೆ

ರಾಷ್ಟ್ರೀಯ ಸಾಮಾಜಿಕ ನೆರವು ಯೋಜನೆಯಡಿ (NSAP) ರಾಷ್ಟ್ರೀಯ ಕುಟುಂಬ ನೆರವು ಯೋಜನೆ ಕೇಂದ್ರ ಸಹಾಯಧನ ಲಭ್ಯವಿದ್ದು ಇದರ ಅನ್ವಯ ಬಡತನ ರೇಖೆಗಿಂತ ಕೆಳಗೆ ಇರುವ ಕುಟುಂಬದ ಮುಖ್ಯಸ್ಥಮರಣವಾದಲ್ಲಿ ಒಂದು ಬಾರಿಯ ಸಹಾಯಧನವನ್ನು ನೀಡಲಾಗುವುದು.

**ನಿಬಂಧನೆಗಳು:**

1) ಕುಟುಂಬ ಮುಖ್ಯಸ್ಥನ ದುಡಿಮೆಯ ಕುಟುಂಬದ ಒಟ್ಟು ದುಡಿಮೆಯ ಗಣನೀಯ ಪ್ರಮಾಣದ್ದಾಗಿರಬೇಕು.
2) ಮರಣದ ಸಮಯವನ್ನು ಕುಟುಂಬದ ಮುಖ್ಯಸ್ಥನ ವಯಸ್ಸು 18 ಕ್ಕಿಂತ ಹೆಚ್ಚಿಗೆ ಮತ್ತು 65 ಕ್ಕಿಂತ ಕಡಿಮೆ ಇರಬೇಕು.
3) ಈ ಯೋಜನೆಯಡಿ ಒಂದು ಬಾರಿ ರೂ.10,000/-ದ ನೆರವು ಲಭ್ಯವಾಗಲಿದೆ.
4) ಅರ್ಜಿಯನ್ನು ಬಿಪಿಎಲ್ ಕುಟುಂಬದ ಜೀವಂತವಿರುವ ಸದಸ್ಯರ ಮುಖ್ಯಸ್ಥನು ಸಲ್ಲಿಸಬೇಕು.

### (8) ಅಂತ್ಯ ಸಂಸ್ಕಾರ ಯೋಜನೆ

ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವ ಕುಟುಂಬದ ಸದಸ್ಯರು ಮೃತ ಪಟ್ಟಲ್ಲಿ ಅವರ ಅಂತಿಮ ಕ್ರಿಯೆಗಾಗಿ ನೆರವು ನೀಡುವ ಬಗ್ಗೆ ಸರ್ಕಾರದ ಮಾರ್ಗಸೂಚಿಗಳನ್ನು ಸಂಖ್ಯೆ ಆರ್‌ಡಿ 20 ಎಂಎಸ್‌ಟಿ 2006 ದಿನಾಂಕ:08.06.2006 ರಲ್ಲಿ ಹೊರಡಿಸಲಾಗಿದೆ. ಈ ಯೋಜನೆಯನ್ನು ಅಂತ್ಯ ಸಂಸ್ಕಾರ ಸಹಾಯ ನಿಧಿ ಎಂದು ಕರೆಯಲಾಗಿದೆ.

ಈ ನೆರವನ್ನು ಜೀವಂತ ವಾರಸುದಾರರಿಗೆ ಅಥವಾ ಕುಟುಂಬದ ಅವಲಂಬಿತ ಸದಸ್ಯರಿಗೆ ಅಥವಾ ಅವರ ಅಂತ್ಯ ಕ್ರಿಯೆ ನೆರವೇರಿಸುವ ಜವಾಬ್ದಾರಿ ಇರುವ ಸದಸ್ಯರಿಗೆ ಅಂತ್ಯ ಕ್ರಿಯೆ ನೆರವೇರಿಸುತ್ತಾರೆಂದು ಖಚಿತಪಡಿಸಿಕೊಂಡು ತಾಲ್ಲೂಕು ತಹಶೀಲ್ದಾರರು ರೂ. 1000/-ಗಳನ್ನು ಬಿಡುಗಡೆ ಮಾಡಬಹುದು.

### (9) ಆಮ್ ಆದ್ಮಿ ಬೀಮಾ ಯೋಜನೆ

ಜನಶ್ರೀ ಭೀಮಾ ಯೋಜನೆಯನ್ನು ಸರ್ಕಾರಿ ಆದೇಶ ಸಂಖ್ಯೆ:ಕಂ.ಇ.25 ಡಿಎಸ್‌ಪಿ 2008, ದಿನಾಂಕ:31.03.2008 ರಂತೆ ರಾಜ್ಯದಲ್ಲಿ ಜಾರಿಗೆ ತಂದಿದ್ದು, ಇದರ ವಿವರಗಳನ್ನು ಕೆಳಕಂಡಂತೆ ತಿಳಿಸಲಾಗಿದೆ.

1. ಅರ್ಹತೆ : ಗ್ರಾಮೀಣ ಭೂರಹಿತ ಕುಟುಂಬಗಳು.
2. ವಯೋಮಿತಿ : 18ರಿಂದ 59 ವರ್ಷ.
3. ಕಾರ್ಯನಿರ್ವಹಣೆ : ರಾಜ್ಯ ಸರ್ಕಾರ.
4. ವಿಮಾ ಕಂತು : ರೂ.200-00 ಪ್ರತಿ ಕುಟುಂಬದ ಮುಖ್ಯಸ್ಥರಿಗೆ,
ರೂ.100-00 ರಾಜ್ಯ ಸರ್ಕಾರ ಮತ್ತು ಉಳಿದ
ರೂ. 100-00 ಕೇಂದ್ರ ಸರ್ಕಾರ ಭರಿಸುತ್ತದೆ.

5. ಲಾಭಗಳು : 1. ನೈಸರ್ಗಿಕ ಸಾವು ರೂ.30,000–00
2. ಆಕಸ್ಮಿಕ ಸಾವು ರೂ.75,000–00
3. ಶಾಶ್ವತ ಅಂಗವಿಕಲತೆ ರೂ.75,000–00
4. ಭಾಗಶಃ ಅಂಗವಿಕಲತೆ ರೂ. 37,500–00
5. ವಿದ್ಯಾರ್ಥಿ ವೇತನ ಎರಡು ಮಕ್ಕಳಿಗೆ ಸೀಮಿತ 9 ರಿಂದ 12ನೇ ತರಗತಿವರೆಗೆ ಮಾತ್ರ

6. ಪ್ರತಿ ತ್ರೈಮಾಸಿಕಕ್ಕೆ ರೂ.300–00 ಪ್ರತಿ ವಿದ್ಯಾರ್ಥಿಗೆ.

ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005 (ಸೆಕ್ಷನ್ 4 (1) (b) (iv) ಮತ್ತು (vi) ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳು, ಕಂದಾಯ ಇಲಾಖೆಯಲ್ಲಿ ದೊರೆಯಬಹುದಾದ ಸೇವೆ ಮತ್ತು ದೊರೆಯಬಹುದಾದ ದಾಖಲಾತಿಗಳನ್ನು ಪಡೆಯುವ ವಿಧಾನ.

ಕಂದಾಯ ಇಲಾಖೆ ನಿರ್ವಹಿಸುವ ಎಲ್ಲಾ ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ಯೋಜನೆಗಳಿಗೆ ತಾಲ್ಲೂಕಿನ ತಹಸೀಲ್ದಾರರೇ ಮಂಜೂರಾತಿ ಪ್ರಾಧಿಕಾರಿಯಾಗಿರುವುದರಿಂದ ತಾಲ್ಲೂಕು ಮಟ್ಟದಲ್ಲಿ ಯೋಜನೆಗಳಿಗೆ ಸಂಬಂಧಪಟ್ಟ ಮಾಹಿತಿ ಪಡೆಯಬಹುದು, ನಿರ್ದೇಶನಾಲಯದಲ್ಲಿ ರಾಜ್ಯ ಮಟ್ಟದ ಯೋಜನೆಯ ಅನುಷ್ಠಾನದ ವಿವರಗಳನ್ನು ಪಡೆಯಬಹುದು.

ನಿರ್ದೇಶಕರು,
ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ,
ಕಂದಾಯ ಇಲಾಖೆ.

ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005 ಸೆಕ್ಷನ್ 4 (1) (b) (v), ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ ಕಂದಾಯ ಇಲಾಖೆಗೆ ಸಂಬಂಧಿಸಿದಂತೆ ಜಾರಿಯಲ್ಲಿರುವ ವಿವಿಧ ಕಾಯಿದೆ, ನಿಯಮಾವಳಿಗಳು ಮತ್ತು ಸುತ್ತೋಲೆಗಳು.

1) ಸಾಮಾಜಿಕ ಭದ್ರತಾ ಯೋಜನೆಗಳ ಅನುಷ್ಠಾನದ ಕುರಿತು ಹೊರಡಿಸಿರುವ ಸುತ್ತೋಲೆಗಳು/ ಸರ್ಕಾರಿ ಆದೇಶಗಳು.
2) ನೌಕರರ ಸೇವಾ ವಿಷಯಕ್ಕೆ ಸಂಬಂಧಿಸಿದಂತೆ ಸಾಮಾನ್ಯ ನಿಯಮಾವಳಿಗಳು ಅನ್ವಯವಾಗುತ್ತವೆ.

ನಿರ್ದೇಶಕರು,
ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ,
ಕಂದಾಯ ಇಲಾಖೆ.

ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005 ಸೆಕ್ಷನ್ 4 (i) (b) (vii) ಸಾರ್ವಜನಿಕ ಪ್ರಾಧಿಕಾರದ ಕಾರ್ಯ ನೀತಿಯ ರಚನೆ ಅಥವಾ ಅದರ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರೊಡನೆ ಸಮಾಲೋಚಿಸಲು ಅಥವಾ ಅವರ ಪ್ರಾತಿನಿಧ್ಯವಿರುವಂತೆ ಮಾಡಲು ಇರುವಂತೆ ಯಾವುದೇ ವ್ಯವಸ್ಥೆಯ ವಿವರಗಳು.

–ಅನ್ವಯಿಸುವುದಿಲ್ಲ.

ನಿರ್ದೇಶಕರು,
ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ,
ಕಂದಾಯ ಇಲಾಖೆ.

ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005 ಸೆಕ್ಷನ್ 4 (i) (b) (viii) ಮಂಡಳಿಗಳು, ಪರಿಷತ್ತುಗಳು ಸಮಿತಿಗಳು ಅಥವಾ ಇತರೆ ನಿರ್ಣಯಗಳು ಮತ್ತು ಅದರ ಭಾಗವಾಗಿ ಅಥವಾ ಅದರ ಸಲಹೆಯ ಉದ್ದೇಶಕ್ಕಾಗಿ ರಚಿತವಾದ ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳನ್ನು ಒಳಗೊಂಡ ಮಂಡಳಿಗಳ ಪರಿಷತ್ತುಗಳ, ಸಮಿತಿಗಳ ಅಥವಾ ಇತರ ನಿಕಾಯಗಳ ಸಭೆಗಳು ಸಾರ್ವಜನಿಕರಿಗೆ ಮುಕ್ತವಾಗಿರುತ್ತವೆಯೇ ಅಥವಾ ಅಂತಹ ಸಭೆಗಳ ನಡವಳಿಗಳು ಸಾರ್ವಜನಿಕರಿಗೆ ದೊರೆಯುತ್ತವೆಯೇ ಎಂಬ ವಿವರ.

–ಅನ್ವಯಿಸುವುದಿಲ್ಲ.

ನಿರ್ದೇಶಕರು,
ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ,
ಕಂದಾಯ ಇಲಾಖೆ.

ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005 ಸೆಕ್ಷನ್ 4 (i) (b) (ix) ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯದ ಅಧಿಕಾರಿಗಳ ಹೆಸರು ಮತ್ತು ದೂರವಾಣಿ ವಿವರ.

| ಕ್ರ. ಸಂ. | ಹುದ್ದೆಯ ವಿವರ | ಕೆಲಸ ನಿರ್ವಹಿಸುತ್ತಿರುವ ಅಧಿಕಾರಿಯ ಹೆಸರು | ದೂರವಾಣಿ ಸಂಖ್ಯೆ |
|---|---|---|---|
| 1. | ನಿರ್ದೇಶಕರು | ಎಂ.ವಿ. ವೀರಭದ್ರಯ್ಯ | 22372959 |
| 2. | ಪೀಠಾಧಿಕಾರಿಗಳು | ಎಸ್. ಕಾತ್ಯಾಯಿನಿ ದೇವಿ | 22372958 |

ನಿರ್ದೇಶಕರು,
ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ,
ಕಂದಾಯ ಇಲಾಖೆ.

ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005 ಸೆಕ್ಷನ್ 4 (i) (b) ಸಾರ್ವಜನಿಕ ಪ್ರಾಧಿಕಾರದ ವಿನಿಮಯಗಳಲ್ಲಿ ಉಪಬಂಧಿಸಿರುವಂತೆ ಪರಿಹಾರದ ವ್ಯವಸ್ಥೆಯು ಸೇರಿದಂತೆ ಅದರ ಪ್ರತಿಯೊಬ್ಬ ಅಧಿಕಾರಿ ಮತ್ತು ನೌಕರರು ಪಡೆಯುವ ತಿಂಗಳ ಗೌರವಧನದ ವಿವರ.

–ಅನ್ವಯಿಸುವುದಿಲ್ಲ.

ನಿರ್ದೇಶಕರು,
ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ,
ಕಂದಾಯ ಇಲಾಖೆ.

ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005, ಸೆಕ್ಷನ್ 4(i) b (xii) ಸಾರ್ವಜನಿಕ ಪ್ರಾಧಿಕಾರಕ್ಕೆ ಹಂಚಿಕೆ ಮಾಡಲಾದ ಮೊಬಲಗನ್ನೊಳಗೊಂಡು, ಸಹಾಯಧನ ಕಾರ್ಯಕ್ರಮಗಳ ಜಾರಿಯ ವಿಧಾನವನ್ನು ಮತ್ತು ಅಂತಹ ಕಾರ್ಯಕ್ರಮಗಳ ಫಲಾನುಭವಿಗಳ ವಿವರ.

–ಅನ್ವಯಿಸುವುದಿಲ್ಲ.

ನಿರ್ದೇಶಕರು,
ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ,
ಕಂದಾಯ ಇಲಾಖೆ.

ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005, ಸೆಕ್ಷನ್ 4(1) (b) (xiii) ಸಾರ್ವಜನಿಕ ಪ್ರಾಧಿಕಾರವು ನೀಡಿರುವ ರಿಯಾಯಿತಿಗಳನ್ನು ಅನುಮತಿ ಪತ್ರಗಳನ್ನು ಅಥವಾ ಅಧಿಕಾರ ಪತ್ರಗಳನ್ನು ಪಡೆಯುವವರ ವಿವರ.

–ಅನ್ವಯಿಸುವುದಿಲ್ಲ.

ನಿರ್ದೇಶಕರು,
ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ,
ಕಂದಾಯ ಇಲಾಖೆ.

ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005, ಸೆಕ್ಷನ್ 4(i) (b) (xiv) ಸಾರ್ವಜನಿಕ ಪ್ರಾಧಿಕಾರದ ಬಳಿ ಲಭ್ಯವಿರುವ ಅಥವಾ ಅದು ಹೊಂದಿರುವ ವಿದ್ಯುನ್ಮಾನ ರೂಪಕ್ಕೆ ಪರಿವರ್ತಿಸುವ ಮಾಹಿತಿಗೆ ಸಂಬಂಧಿಸಿದ ವಿವರ.

ಸಾಮಾಜಿಕ ಭದ್ರತಾ ಯೋಜನೆಗಳಾದ ಇಂದಿರಾಗಾಂಧಿ ರಾಷ್ಟ್ರೀಯ ವೃದ್ಧಾಪ್ಯವೇತನ, ವಿಧವಾವೇತನ, ಅಂಗವಿಕಲ ವೇತನ ಹಾಗೂ ಸಂಧ್ಯಾ ಸುರಕ್ಷಾ ಯೋಜನೆಗಳಡಿಯಲ್ಲಿ ಇರುವ ಫಲಾನುಭವಿಗಳ ವಿವರಗಳನ್ನು ನಿರ್ದೇಶನಾಲಯದ ವೆಬ್ ಸೈಟ್‌ನಲ್ಲಿ ಪಡೆಯಬಹುದಾಗಿದೆ. ವೆಬ್ ಸೈಟ್ ವಿಳಾಸ: ಡಿಎಸ್‌ಎಸ್‌ಪಿ.ಕೆಎಆರ್.ಎನ್‌ಐಸಿ.ಇನ್ (dssp.kar.nic.in)

ನಿರ್ದೇಶಕರು,
ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ,
ಕಂದಾಯ ಇಲಾಖೆ.

ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005 (ಸೆಕ್ಷನ್ 4 (1) (b) (xv) ಸಾಮಾನ್ಯ ತಿಳುವಳಿಕೆ.

**ಪೀಠಿಕೆ**

ರಾಜ್ಯ ಸರ್ಕಾರವು ಸಮಾಜದ ದುರ್ಬಲ ವರ್ಗಗಳಾದ ವೃದ್ಧರು, ಅಂಗವಿಕಲರು ಹಾಗೂ ನಿರ್ಗತಿಕ ವಿಧವೆಯರ ಆರ್ಥಿಕ ಸಹಾಯಕ್ಕಾಗಿ ಕೆಳಕಂಡ ಸಾಮಾಜಿಕ ಭದ್ರತಾ ಯೋಜನೆಗಳನ್ನು ಅನುಷ್ಠಾನಗೊಳಿಸಿದ್ದು ತಾಲ್ಲೂಕಿನ ತಹಸೀಲ್ದಾರರು ಮಂಜೂರಾತಿ ಪ್ರಾಧಿಕಾರಗಳಾಗಿರುತ್ತಾರೆ.

1) ಇಂದಿರಾ ಗಾಂಧಿ ರಾಷ್ಟ್ರೀಯ ವೃದ್ದಾಪ್ಯ ವೇತನ,
2) ಸಂಧ್ಯಾ ಸುರಕ್ಷಾ ಯೋಜನೆ,
3) ನಿರ್ಗತಿಕ ವಿಧವಾ ವೇತನ,
4) ಅಂಗವಿಕಲ ವೇತನ,
5) ರಾಷ್ಟ್ರೀಯ ಕುಟುಂಬ ನೆರವು ಯೋಜನೆ,
6) ಅಂತ್ಯ ಸಂಸ್ಕಾರ ಯೋಜನೆ,
7) ಆದರ್ಶ ವಿವಾಹ ಯೋಜನೆ
8) ಆಮ್ ಆದ್ಮಿ ಬೀಮಾ ಯೋಜನೆ,
9) ಅನ್ನಪೂರ್ಣ ಯೋಜನೆ.

ಸಾಮಾಜಿಕ ಭದ್ರತಾ ಯೋಜನೆಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕ ಕುಂದು ಕೊರತೆ ಮತ್ತು ದೂರು ನಿವಾರಣೆ ಬಗ್ಗೆ ಲಭ್ಯವಿರುವ ಆಡಳಿತ ವ್ಯವಸ್ಥೆ ಮತ್ತು ಕಾರ್ಯ ವಿಧಾನಗಳ ಬಗ್ಗೆ ಈ ಕೆಳಕಂಡಂತೆ ವಿವರಿಸಲಾಗಿದೆ.

**1. ಸಾಮಾನ್ಯ ಮಾಹಿತಿ:**

1) ತಾಲ್ಲೂಕಿನ ತಹಸೀಲ್ದಾರರು ಮೇಲ್ಕಂಡ ಸಾಮಾಜಿಕ ಭದ್ರತೆ ಯೋಜನೆಗಳ ಮಂಜೂರಾತಿ ಪ್ರಾಧಿಕಾರಿಯಾಗಿರುತ್ತಾರೆ.

2) ಕೆಲಸದ ವೇಳೆ: ಬೆಳಿಗ್ಗೆ : 10.00 ಗಂಟೆಯಿಂದ 1.30 ರವರೆಗೆ
ಮದ್ಯಾಹ್ನ : 2.15 ಗಂಟೆಯಿಂದ 5.30 ರವರೆಗೆ
ಊಟದ ಸಮಯ : 1.30 ರಿಂದ 2.15 ರವರೆಗೆ

ಭಾನುವಾರ ಮತ್ತು ಸಾರ್ವತ್ರಿಕ ರಜಾದಿನಗಳಂದು ಕಚೇರಿಯ ಮುಚ್ಚಲ್ಪಟ್ಟಿರುತ್ತದೆ.

ಪ್ರತಿ ಕಛೇರಿಯ ಹೆಸರು ಮತ್ತು ದೂರವಾಣಿ ಸಂಖ್ಯೆಗಳನ್ನು ಸಂಬಂಧಪಟ್ಟ ತಾಲ್ಲೂಕು ಕಛೇರಿಗಳಲ್ಲಿ ತಿಳುವಳಿಕೆ ಬೋರ್ಡಿನಲ್ಲಿ ಪ್ರಕಟಿಸಲಾಗಿದೆ.

ಲಭ್ಯವಿರುವ ಸೇವೆಗಳು:

1) ಇಂದಿರಾ ಗಾಂಧಿ ರಾಷ್ಟ್ರೀಯ ವೃದ್ದಾಪ್ಯ ವೇತನ,
2) ಸಂಧ್ಯಾ ಸುರಕ್ಷಾ ಯೋಜನೆ,
3) ನಿರ್ಗತಿಕ ವಿಧವಾ ವೇತನ,
4) ಅಂಗವಿಕಲ ವೇತನ,
5) ರಾಷ್ಟ್ರೀಯ ಕುಟುಂಬ ನೆರವು ಯೋಜನೆ,
6) ಅಂತ್ಯ ಸಂಸ್ಕಾರ ಯೋಜನೆ,
7) ಆದರ್ಶ ವಿವಾಹ ಯೋಜನೆ
8) ಆಮ್ ಆದ್ಮಿ ಬೀಮಾ ಯೋಜನೆ,
9) ಅನ್ನಪೂರ್ಣ ಯೋಜನೆ.

**ನಮ್ಮ ಬದ್ಧತೆ:**

ಇಲಾಖೆಗೆ ಸಂಬಂಧಿಸಿದಂತೆ ರಾಜ್ಯಾದ್ಯಂತ ಕಾರ್ಯನಿರ್ವಹಿಸುವ ಸಿಬ್ಬಂದಿಯ ಸೇವೆಯ ಉತ್ತಮ ಗುಣಮಟ್ಟಗಳಿಂದ ಕೂಡಿದ್ದಾಗಿರುತ್ತದೆ.

ಉದಾರತೆ ಮತ್ತು ಕಾಲಮಿತಿಯ ಸಹಾಯಕ್ಕೆ ಬದ್ಧವಾಗಿರುತ್ತದೆ.

ಲಕ್ಷ್ಯ ಮತ್ತು ಪಾರದರ್ಶಕತೆಗೆ ಬದ್ದವಾಗಿರುತ್ತದೆ.

ದಕ್ಷತೆ ಮತ್ತು ಸಕಾಲ ಸ್ಪಂದನೆಯೊಂದಿಗೆ ಕಾರ್ಯ ನಿರ್ವಹಿಸಲು ಬದ್ದರಾಗಿರುತ್ತಾರೆ.

**ಕುಂದುಕೊರತೆಗಳ ನಿವಾರಣೆ:**

ಅ) ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸದೇ ಇರುವವರ ಮೇಲೆ ಸೂಕ್ತ ಕ್ರಮಗಳನ್ನು ಜರುಗಿಸಲಾಗುವುದು. ಅರ್ಜಿದಾರರಿಗೆ ಕೈಗೊಂಡ ಕ್ರಮದ ಬಗ್ಗೆ ಮಾಹಿತಿ ಪೂರೈಸಲಾಗುವುದು.

ಆ) ಕರ್ತವ್ಯದಲ್ಲಿ ನಿರಂತರವಾಗಿ ಕೊರತೆ ಕಂಡು ಬಂದಲ್ಲಿ, ಅಂತಹ ಕೊರತೆಗಳಿಗೆ ಕಾರಣಗಳನ್ನು ಕಂಡು ಹಿಡಿದು ಪರಿಹಾರಗಳನ್ನು ಸಹ ಸಾರ್ವಜನಿಕರ ಗಮನಕ್ಕೆ ಸಂಬಂಧಿಸಿದ ಕಛೇರಿಗಳಲ್ಲಿ ಪ್ರಕಟಿಸಲಾಗುವುದು.

ಇ) ಕಛೇರಿಯ ಮುಖ್ಯಸ್ಥರು ಪ್ರತಿ ತಿಂಗಳೂ ಪುನರಾವಲೋಕನ ಮಾಡುವರು. ಕುಂದು/ದೂರುಗಳನ್ನು ಪರಿಶೀಲಿಸುವುದು ಹಾಗೂ ಸೂಕ್ತ ಪರಿಹಾರಗಳನ್ನು ಮೇಲಾಧಿಕಾರಿಗಳಿಂದ ಪಡೆಯಲಾಗುವುದು.

ಈ) ಸಾರ್ವಜನಿಕರ ಕುಂದು ಕೊರತೆಗೆ ಸಂಬಂಧಿಸಿದಂತೆ ಅವರುಗಳ ಗಮನಕ್ಕಾಗಿ ಕೆಲವು ಮಾಹಿತಿಗಳನ್ನು ಎಲ್ಲ ಕಛೇರಿಗಳಲ್ಲಿ ತಿಳುವಳಿಕೆ ಫಲಕದಲ್ಲಿ ಪ್ರಕಟಿಸಲಾಗಿದೆ. ಅದನ್ನು ಈ ಕೆಳಗೆ ಪುನರುಚ್ಚರಿಸಲಾಗಿದೆ.

1) ಸಾರ್ವಜನಿಕರು ತಮ್ಮ ಕುಂದುಕೊರತೆಗಳ ನಿವಾರಣೆ ಸಂಬಂಧಿಸಿದಂತೆ ಸಂಪರ್ಕಾಧಿಕಾರಿಗಳನ್ನು ಭೇಟಿ ಮಾಡತಕ್ಕದ್ದು.

2) ಸಾರ್ವಜನಿಕರು ತಮ್ಮ ಅರ್ಜಿ/ಅಹವಾಲಗಳನ್ನು ಸಾರ್ವಜನಿಕರ ಕುಂದು ಕೊರತೆ ಘಟಕದಲ್ಲಿ ನೀಡತಕ್ಕದ್ದು ಹಾಗೂ ಸ್ವೀಕೃತಿ ಪಡೆಯುವುದು.

3) ಅನಧಿಕೃತ ಏಜಂಟ್ ಅಥವಾ ಮಧ್ಯವರ್ತಿಗಳನ್ನು ಸಂಪರ್ಕಿಸಬಾರದು, ಅವರುಗಳು ಒಡ್ಡುವ ಆಸೆ ಅಮಿಷಗಳಿಗೆ ಬಲಿಯಾಗಿ ತಪ್ಪುದಾರಿಗೆ ಹೋಗಬಾರದು.

4) ಅವಶ್ಯವಿರುವ ದೃಢೀಕೃತ ದಾಖಲಾತಿಗಳನ್ನು ಅರ್ಜಿಗಳನ್ನು ಸಲ್ಲಿಸಿ ಸಾರ್ವಜನಿಕ ಸಂಪರ್ಕ ಘಟಕಗಳಲ್ಲಿಯೇ ಪಡೆಯತಕ್ಕದ್ದು.

1. ಸಾರ್ವಜನಿಕರಿಂದ ಅರ್ಜಿ/ ದೂರುಗಳನ್ನು ಸ್ವೀಕರಿಸುವುದು ಅವುಗಳನ್ನು ವಿಶೇಷವಾಗಿ ನಿಗದಿಪಡಿಸಿದ ವಹಿಗಳಲ್ಲಿ ದಾಖಲಿಸಿ ನಿರ್ವಹಿಸುವುದು.
2. ಸಾರ್ವಜನಿಕ ಸಮಸ್ಯೆ ಕುಂದುಕೊರತೆಗಳ ನಿವಾರಣೆಗೆ ಕ್ರಮಗಳನ್ನು ಜರುಗಿಸುವುದು. ಅವರುಗಳೊಂದಿಗೆ ಸೌಹಾರ್ದಯುತವಾಗಿ ನಡೆದುಕೊಳ್ಳುವುದು.
3. ದೂರುಗಳನ್ನು ದಾಖಲಿಸಿಕೊಳ್ಳುವುದು ಹಾಗೂ ಸಾಧ್ಯವಾದಲ್ಲಿ ಆ ದಿನವೇ ಸೂಕ್ತ ಪರಿಹಾರವನ್ನು ಒದಗಿಸುವುದು.
4. ಅದೇ ದಿನವೇ ಪರಿಹಾರವನ್ನು ಒದಗಿಸಲು ಸಾಧ್ಯವಾಗದಿದ್ದಲ್ಲಿ ಸೂಕ್ತ ದಿನಾಂಕವನ್ನು ನಿಗದಿಪಡಿಸಿ ಆ ದಿನದಂದು ಪರಿಹಾರ ದೊರಕುವ ಕ್ರಮಗಳನ್ನು ಜರುಗಿಸತಕ್ಕದ್ದು.
5. ಸಾರ್ವಜನಿಕರ ದೂರು/ ಕೊರತೆಗಳನ್ನು ಆಯಾ ಕಛೇರಿಯ ಇಲಾಖೆಯ ಮುಖ್ಯಸ್ಥರಿಗೆ/ ಕಛೇರಿ ಮುಖ್ಯಸ್ಥರ ಗಮನಕ್ಕೆ ತಂದು ಸೂಕ್ತ ಪರಿಹಾರ ಕೈಗೊಳ್ಳುವಂತೆ ಮಾಡುವುದು ಸಾರ್ವಜನಿಕ ಸಂಪರ್ಕಾಧಿಕಾರಿಯ ಕರ್ತವ್ಯವಾಗಿರುತ್ತದೆ. ಯಾವುದೇ ರೀತಿ ವಿಳಂಬವಾಗುವುದನ್ನು ತಪ್ಪಿಸುವುದು ಇವರ ಜವಾಬ್ದಾರಿಯಾಗಿರುತ್ತದೆ.
6. ಪ್ರತಿವಾರ/ ಮಾಸದ ಕೊನೆಯಲ್ಲಿ ದೂರುಗಳ / ಅರ್ಜಿಗಳ ಘೋಷ್ವಾರೆಯನ್ನು ತೆಗೆದು ಕಛೇರಿಯ ಮುಖ್ಯಸ್ಥರ ಗಮನಕ್ಕೆ ತಂದು ಅದನ್ನು ಇಲಾಖಾ ಮುಖ್ಯಸ್ಥರ ಗಮನಕ್ಕೆ ತರತಕ್ಕದ್ದು.

**ನಾಗರೀಕರಿಂದ ನಮ್ಮ ಬಯಕೆ:**

1. ಇಲಾಖಾ ಅಧಿಕಾರಿ / ನೌಕರರುಗಳನ್ನು ನೇರವಾಗಿ ಸಂಪರ್ಕಿಸುವುದು ಅನಧಿಕೃತ ಏಜಂಟ್ / ಮಧ್ಯವರ್ತಿಗಳನ್ನು ಪ್ರೋತ್ಸಾಹಿಸಬಾರದು.
2. ಕ್ಷೇತ್ರ ಸಿಬ್ಬಂದಿಯೊಂದಿಗೆ ಸಹಕರಿಸುವುದು.
3. ಸೇವೆ ಪಡೆಯಲು ಅಗತ್ಯ ಮಾಹಿತಿಗಳನ್ನು ಒದಗಿಸುವುದು.

ನಿರ್ದೇಶಕರು,
ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ,
ಕಂದಾಯ ಇಲಾಖೆ.

ಪಿ.ಆರ್.422

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/346/ಡಿಟಿಸಿಆರ್/2007-08, ದಿನಾಂಕ:28ನೇ ಫೆಬ್ರವರಿ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

| **ಫಿರ್ಯಾದುದಾರರು:** | | **ಆರೋಪಿ:** |
|---|---|---|
| ಶ್ರೀ ಕೃಷ್ಣ ನಾಯಕ್, ಅಬಕಾರಿ ಉಪ ನಿರೀಕ್ಷಕರು (ನಂ.1) ಗ್ರಾ, ಜಾರಿ ಮತ್ತು ತನಿಖೆ, ಸುಳ್ಯ. | **ವಿರುದ್ಧ** | ಶ್ರೀ ವಿಶ್ವನಾಥ ರೈ, ಬಿನ್:ದಿ:ಮಾಯಿಲಪ್ಪ ರೈ, ಮಾಳ ಮನೆ, ಕಾಣಿಯೂರು ಗ್ರಾಮ, ಪುತ್ತೂರು. |
| | | **ವಾಹನ ಮಾಲೀಕರು:** |
| | | ತಿಮ್ಮಪ್ಪ, ಬಿನ್ ವೆಂಕಣ್ಣ ಗೌಡ, ಖದೀರ್ ಹೌಸ್, ಮುರುಳ್ಯ ಮನೆ, ಸುಳ್ಯ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:26.02.2008 ರಂದು ಫಿರ್ಯಾದುದಾರರು ಹಾಗೂ ಸಿಬ್ಬಂದಿಯೊಂದಿಗೆ ಸುಳ್ಯ ತಾಲ್ಲೂಕಿನ ಮುರುಳ್ಯ ಗ್ರಾಮದ ಕಾಯರ್‌ತಡ್ಕ ಎಂಬಲ್ಲಿ ಅಕ್ರಮ ಮದ್ಯ ಮಾರಾಟ ಮಾಡುತ್ತಿದ್ದಾರೆ ಎಂಬ ದೊರೆತ ಖಚಿತ ವರ್ತಮಾನದ ಮೇರೆಗೆ ಸದರಿ ಸ್ಥಳದಲ್ಲಿ ದಾಳಿ ನಡೆಸಿದ ಸಂದರ್ಭದಲ್ಲಿ ಕಾಯರ್‌ತಡ್ಕ ಎಂಬಲ್ಲಿ ಒಂದು ಮೋಟಾರ್ ಬೈಕನ್ನು ನಿಲ್ಲಿಸಿ ಅದರ ಪಕ್ಕದಲ್ಲಿ ಒಬ್ಬ ವ್ಯಕ್ತಿ ನಿಂತಿರುವುದು ಕಂಡು ಬಂದಿದ್ದು, ಸಮವಸ್ತ್ರದಲ್ಲಿದ್ದ ಸಿಬ್ಬಂದಿಯವರನ್ನು ಕಂಡು ಸದರಿ ಮೋಟಾರ್ ಬೈಕನ್ನು ದಾರಿ

ಮಧ್ಯದಲ್ಲಿ ನಿಲ್ಲಿಸಿ ಪರಾರಿಯಾದನು. ಮೋಟಾರ್ ಬೈಕ್‌ನ ಹತ್ತಿರ ಇದ್ದ ವ್ಯಕ್ತಿಗಳಲ್ಲಿ ವಿಚಾರಿಸಿದಾಗ ತಾವು ಮದ್ಯವನ್ನು ಖರೀದಿಸಲು ಬಂದಿರುವುದು ಹಾಗೂ ಆತನು 180 ಎಂ.ಎಲ್.ನ ಬಾಸ್ ವಿಸ್ಕಿಯ ಮದ್ಯವನ್ನು ಮಾರಾಟ ಮಾಡಿರುವುದಾಗಿ ತಿಳಿಸಿದ್ದು, ಮಾರಾಟ ಮಾಡುತ್ತಿದ್ದ ವ್ಯಕ್ತಿ ವಿಶ್ವನಾಥ ರೈ, ಬಿನ್ ದಿ. ಮಾಯಿಲಪ್ಪ ರೈ, ಮಾಳ ಮನೆ, ಕಾಣಿಯೂರು ಗ್ರಾಮ, ಪುತ್ತೂರು ಎಂಬಾತನಾಗಿದ್ದು, ಸದರಿ ವ್ಯಕ್ತಿಯ ಹೇಳಿಕೆಯ ಮೇರೆಗೆ ಬಿಟ್ಟು ಹೋದ ಮೋಟಾರು ಬೈಕನ್ನು ಶೋಧನಾ ಕಾರ್ಯ ನಡೆಸಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್‌ನ್ನು ಪಡೆಯಲು ಕಾಲಾವಕಾಶ ಇಲ್ಲದ ಕಾರಣ ಸರ್ಚ್ ಮೆಮೊವನ್ನು ತಯಾರಿಸಿ, ಹಾಜರಿದ್ದ ಸಾಕ್ಷಿದಾರರ ಸಮಕ್ಷಮ ಮೋಟಾರ್ ಬೈಕ್‌ನ ಶೋಧನಾ ಕಾರ್ಯ ಪ್ರಾರಂಭಿಸಿ, ಸದರಿ ಮೋಟಾರ್ ಬೈಕ್‌ನ ನೋಂದಣಿ ಸಂಖ್ಯೆ: ಕೆಎ–21–ಜೆ–3289 ಆಗಿದ್ದು, ಇದು ಟಿ.ವಿ.ಎಸ್. ವಿಕ್ಟರ್ ಜಿಎಕ್ಸ್ ಎಂಬುದಾಗಿದ್ದು, ಇದರ ಚಾಸೀಸ್ ಸಂಖ್ಯೆ: ಎಂಡಿ 625 ಎಎಫ್ 1651 ಎಲ್‌ಎಸ್ 4523 ಮತ್ತು ಇಂಜೀನ್ ಸಂಖ್ಯೆ: ಓಎಫ್‌ಐಎಲ್ 51470743 ಆಗಿರುತ್ತದೆ. ಸದರಿ ಆರೋಪಿಯು ಯಾವುದೇ ದಾಖಲಾತಿಗಳಿಲ್ಲದೆ ಅಕ್ರಮವಾಗಿ ಬೈಕ್‌ನ ಹಿಂದಿನ ಸೀಟ್‌ನ ಮೇಲೆ ಒಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್.ನ 30 ಸೀಸೆಗಳು ಇರುವುದು ಕಂಡು ಬಂತು. ಸದರಿ ಮದ್ಯವನ್ನು ಪರಿಶೀಲಿಸಿದಾಗ, ಇದು ಬಾಸ್ ವಿಸ್ಕಿಯ ಲೇಬಲ್ ಅಂಟಿಸಿರುವ ಮದ್ಯವಾಗಿದ್ದು, ಇದು ಅಕ್ರಮ ಮದ್ಯವಾಗಿರುವುದು ಖಚಿತವಾಗಿರುವುದರಿಂದ, ಹಾಜರಿದ್ದ ಸಾಕ್ಷಿದಾರರ ಸಮಕ್ಷಮ ದೊರೆತ ಮದ್ಯದಿಂದ 180 ಎಂ.ಎಲ್.ನ ಒಂದು ಸೀಸೆಯನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಅದಕ್ಕೆ ಬಟ್ಟೆ ದಾರದಿಂದ ಸುತ್ತಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಲಾಯಿತು. ಅದೇ ಸೀಲ್‌ನ ಮಾದರಿ ಮೊಹರಿನ ನಮೂನೆ ಮಾದರಿಯನ್ನು ತಯಾರಿಸಲಾಯಿತು. ಮಾದರಿ ಬಾಟ್ಲಿಗೆ ಆರೋಪಿಯ ಹೆಸರು ಮತ್ತು ವಿಳಾಸದ ಗುರುತಿನ ಚೀಟಿಯನ್ನು ಅಂಟಿಸಲಾಯಿತು. ಇದು 1965ರ ಕರ್ನಾಟಕ ಅಬಕಾರಿ ಕಾಯಿದೆ ಕಲಂ 11, 13, 14 ರಂತೆ ಅಪರಾಧವಾಗಿದ್ದು, ಕಲಂ 32, 34, 38(ಎ) ರಂತೆ ಶಿಕ್ಷಾರ್ಹವಾಗಿರುವುದರಿಂದ ಮದ್ಯ ಮತ್ತು ಸಾಗಾಟಕ್ಕೆ ಬಳಸಿದ ಮೋಟಾರ್ ಬೈಕ್‌ನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು ಆರೋಪಿ ವಿರುದ್ಧ ಪ್ರಥಮ ಮಾಹಿತಿ ವರದಿ ಸಂಖ್ಯೆ: 15/07–08 ದಿನಾಂಕ:26.02.2008ರಂತೆ ಪ್ರಕರಣವನ್ನು ನೋಂದಾಯಿಸಿ ಮುಂದಿನ ತನಿಖೆಯನ್ನು ಮುಂದುವರಿಸಿರುತ್ತಾರೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮೋಟಾರ್ ಬೈಕನ್ನು ಆರ್.ಸಿ. ಮಾಲೀಕರಾದ ತಿಮ್ಮಪ್ಪ ಬಿನ್ ವೆಂಕಣ್ಣ ಗೌಡ ಖದೀರ್ ಹೌಸ್, ಮುರುಳ್ಯ ಮನೆ, ಸುಳ್ಯ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ:30.04.2008ರಂದು ಅರ್ಜಿ ಸಲ್ಲಿಸಿ, ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮೋಟಾರ್ ಬೈಕ್‌ನ ನೋಂದಣಿ ಸಂಖ್ಯೆ: ಕೆಎ–21–ಜೆ–3289 ಇದರ ಆರ್.ಸಿ. ಮಾಲೀಕನಾಗಿದ್ದು, ವಶಪಡಿಸಿಕೊಂಡ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಿಕೊಡಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ.

ಅರ್ಜಿದಾರರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43(ಬಿ) ಪ್ರಕಾರ ದಿನಾಂಕ:17.07.2008ರಂದು ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಮೋಟಾರ್ ಬೈಕ್‌ನ್ನು ನೋಂದಣಿ ಮಾಲೀಕರ ವಿವರ ಮತ್ತು ಮೌಲ್ಯ ಮಾಪನ ವರದಿಯನ್ನು ಪಡೆಯಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು, ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:12.05.2008ರಂದು ಪತ್ರ ಬರೆಯಲಾಗಿದ್ದು, ಅವರು ದಿನಾಂಕ:30.05.2008ರಂದು ವಾಹನದ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯೊಂದಿಗೆ ವಾಹನದ ಈಗಿನ ಮೌಲ್ಯ ರೂ.20,000/– ಗಳಾಗಬಹುದೆಂದು ಅಂದಾಜಿಸಿ ದೃಢೀಕರಣ ಪತ್ರ ನೀಡಿರುತ್ತಾರೆ.

ವಾಹನದ ಬಿಡುಗಡೆ ಕುರಿತು ದಾಖಲಾತಿಗಳನ್ನು ಸಲ್ಲಿಸುವ ಬಗ್ಗೆ ವಾಹನದ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿನಾಂಕ:10.07.2008 ರಂದು ನೋಟೀಸು ನೀಡಲಾಗಿದ್ದು, ಸದರಿ ನೋಟೀಸಿಗೆ ಅನುಸಾರ ಅರ್ಜಿದಾರರು ಈ ಪ್ರಾಧಿಕಾರಕ್ಕೆ ರೂ.20,000/– ಮೌಲ್ಯಕ್ಕೆ ಸಮಾನವಾದ ಬ್ಯಾಂಕ್ ಭದ್ರತೆ ಸಂಖ್ಯೆ: 1/08 ದಿನಾಂಕ:30.07.2008 ರಂತೆ ಭದ್ರತಾ ಪತ್ರ ಒಪ್ಪಿಸಿ, ಅಷ್ಟೇ ಮೊತ್ತಕ್ಕೆ ಇಬ್ಬರು ಜಾಮೀನುದಾರರಾದ 1) ಶ್ರೀ ಕೆ. ಕೊರಗಜ್ಜ, ಬಿನ್ ಭೋಜ, ಹೌಸ್ ನಂ.2–64, ಕಾಣಿಯೂರು, ಮಂಗಳೂರು ತಾಲ್ಲೂಕು ಮತ್ತು 2) ಶ್ರೀ ವಿಶ್ವನಾಥ ರೈ, ಬಿನ್ ಮೈಲಾಪು ರೈ, ಮಲಾಯಿ ಮನೆ, ಕಾಣಿಯೂರು ಗ್ರಾಮ, ಮಂಗಳೂರು ತಾಲ್ಲೂಕು ಇವರಿಂದ ಸದರಿ ಮೊತ್ತಕ್ಕೆ ಬಾಂಡ್ ಪತ್ರ ಮತ್ತು ಸದರಿ ವ್ಯಕ್ತಿಗಳಿಂದ ಅಫಿದಾವಿತ್‌ಗಳನ್ನು ಹಾಜರುಪಡಿಸಿರುವುದರಿಂದ, ಫಿರ್ಯಾದುದಾರರು ವಶಪಡಿಸಿಕೊಂಡ ವಾಹನ ಸಂಖ್ಯೆ: ಕೆಎ–21–ಜೆ–3289 ಮೋಟಾರ್ ಬೈಕನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಎ) ಮತ್ತು (ಬಿ) ಅಡಿಯಲ್ಲಿ ಮುಂದಿನ ಮುಟ್ಟುಗೋಲು ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಎ)(2)(1) ತಿದ್ದುಪಡಿ ನಿಯಮಾನುಸಾರ ಕೆಲವು ಷರತ್ತುಗಳಿಗೊಳಪಟ್ಟು ವಾಹನ ನೋಂದಾಯಿತ ಮಾಲೀಕರಾದ ಶ್ರೀ ತಿಮ್ಮಪ್ಪ ಗೌಡ ಇವರಿಗೆ ದಿನಾಂಕ:02.08.2008ರಂದು ಮಧ್ಯಂತರ ಸುಪರ್ಧಿಗೆ ಬಿಡುಗಡೆಗೊಳಿಸಲಾಗಿದೆ.

ಅಬಕಾರಿ ಉಪ ನಿರೀಕ್ಷಕರು (ನಂ.1), ಸುಳ್ಯ ವಲಯ ಇವರ ತನಿಖಾ ವರದಿ ಸಂಖ್ಯೆ: 51/07–08, ದಿನಾಂಕ:28.05.2008ರ ವರದಿಯಲ್ಲಿ ವಶಪಡಿಸಿಕೊಂಡ ಮದ್ಯದಿಂದ ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಸೀಸೆಯನ್ನು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ವರದಿ ಸಂಖ್ಯೆ: ಇ–108

ದಿನಾಂಕ:04.04.2008ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ 42.0% ಇರುವುದಾಗಿ ದೃಢೀಕರಿಸಿರುತ್ತಾರೆ. ಹಾಗೂ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯವನ್ನು ಸ್ವಾಧೀನಪಡಿಸಿಕೊಳ್ಳುವ ಬಗ್ಗೆ ಈ ಪ್ರಾಧಿಕಾರದಲ್ಲಿ ಯಾರೊಬ್ಬರೂ ಬೇಡಿಕೆ ಅರ್ಜಿ ಸಲ್ಲಿಸದೆ ಇರುವುದರಿಂದ ಸದರಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ/346/ಡಿಟಿಸಿಆರ್/07–08 ದಿನಾಂಕ:20.01.2009 ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಮುಟ್ಟುಗೋಲು ನಡವಳಿಯನ್ನು ಕಾಯ್ದಿರಿಸಿ, ಬಾಕಿ ಉಳಿದ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರ ಸಮಕ್ಷಮ ಸೂಕ್ತ ಮಹಜರು ಜರುಗಿಸಿ ನಾಶಪಡಿಸಲು ಆದೇಶಿಸಲಾಗಿದೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ ಸರ್ಕಾರದ ಅಭಿಯೋಜನೆ ಪರ ಸಾಕ್ಷಿಯನ್ನು ಪ್ರತಿರಕ್ಷಾ ಪರಸಾಕ್ಷಿಯನ್ನು ವಿಚಾರಣೆಗೆ ಒಳಪಡಿಸಿ, ಅವರುಗಳ ಹೇಳಿಕೆಗಳನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನ ವಿವಾದಾಂಶಗಳನ್ನು ಪರಿಶೀಲಿಸುವ ಅಗತ್ಯವಾಗಿದ್ದು, ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ:26.02.2008 ರಂದು ವಾಹನ ಮೋಟಾರು ಸೈಕಲ್ ಸಂಖ್ಯೆ: ಕೆಎ–21–ಜೆ–3289 ರಲ್ಲಿ ಅಕ್ರಮ ಮದ್ಯ ಮಾರಾಟ ಮತ್ತು ಸಾಗಾಟ ಮಾಡಲಾಗಿತ್ತೇ?

2) ಸದರಿ ವಾಹನದಲ್ಲಿ ಅಕ್ರಮ ಮದ್ಯವನ್ನು ತನ್ನ ತಿಳುವಳಿಕೆಗೆ ಬಾರದೆ ಮಾಡಲಾಗಿತ್ತೇ ಎಂಬುವುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತು ಪಡಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಲಾಗಿದೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು. ಎರಡನೇ ಅಂಶವನ್ನು ಸಕರಾತ್ಮಕವಾಗಿ ಇಲ್ಲವೆಂದು ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ:1**

ಶ್ರೀ ಕೃಷ್ಣ ನಾಯಕ್, ಅಬಕಾರಿ ಉಪ ನಿರೀಕ್ಷಕರು (ನಂ.1), ಸುಳ್ಯ ವಲಯ ಇವರು ಈ ಪ್ರಕರಣದ ಫಿರ್ಯಾದುದಾರರು ಮತ್ತು ತನಿಖಾಧಿಕಾರಿಯಾಗಿದ್ದು, ಇವರು ದಿನಾಂಕ:10.12.2008 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿರುತ್ತಾರೆ.

ತಾನು ದಿನಾಂಕ:09.06.2006 ರಿಂದ ದಿನಾಂಕ:31.03.2008ರವರೆಗೆ ಅಬಕಾರಿ ಉಪ ನಿರೀಕ್ಷಕರಾಗಿ ಸುಳ್ಯ ಜಾರಿ ಮತ್ತು ತನಿಖೆ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೆ. ದಿನಾಂಕ:26.02.2008ರಂದು ತಾನು ಸಿಬ್ಬಂದಿಯವರೊಂದಿಗೆ ರಾತ್ರಿ 8–00 ಗಂಟೆಗೆ ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ವಿಭಾಗರವರ ನಿರ್ದೇಶನದ ಮೇರೆಗೆ ಸುಳ್ಯ ತಾಲ್ಲೂಕು ಮುರುಳ್ಯ ಗ್ರಾಮದ ಸುಳ್ಯ–ಪುತ್ತೂರು ರಸ್ತೆಯ ಕಾಯರ್‌ತಡ್ಕ ಎಂಬಲ್ಲಿ ಅಕ್ರಮ ಮದ್ಯ ಮಾರಾಟ ಮಾಡಲಾಗುತ್ತಿದೆ ಎಂಬ ದೊರೆತ ಖಚಿತ ವರ್ತಮಾನದ ಮೇರೆಗೆ ಇಲಾಖಾ ವಾಹನದಲ್ಲಿ ಸಿಬ್ಬಂದಿಯೊಂದಿಗೆ ಸದ್ರಿ ಸ್ಥಳಕ್ಕೆ ಹೋಗಿ ದಾಳಿ ನಡೆಸಿದ ಸಂದರ್ಭದಲ್ಲಿ ಒಂದು ಮೋಟಾರು ಬೈಕ್ ಹಾಗೂ ಅದರ ಬಳಿ ಜನರು ನಿಂತಿರುವುದು ಕಂಡು ಬಂತು. ಸಮವಸ್ತ್ರದಲ್ಲಿದ್ದ ನಮ್ಮನ್ನು ನೋಡಿ ಸದ್ರಿ ವ್ಯಕ್ತಿಗಳು ಕೂಡಲೇ ಓಡಿ ಹೋಗಿ ಅವರಲ್ಲಿ ಒಬ್ಬಾತನನ್ನು ಹಿಡಿದು ವಿಚಾರಿಸಲಾಗಿ, ಆತನ ಬಳಿ 180 ಎಂ.ಎಲ್.ನ ಬಾಸ್ ವಿಸ್ಕಿ ಬಾಟಲ್‌ಗಳಿರುವುದು ಕಂಡು ಬಂತು. ನಂತರ ಆತನನ್ನು ವಿಚಾರಿಸಲಾಗಿ ಓಡಿ ಹೋದ ವ್ಯಕ್ತಿಗಳ ಪೈಕಿ ಒಬ್ಬ ವಿಶ್ವನಾಥ ರೈ ಎಂದು, ಆತನಿಂದ ರೂ.40ಕ್ಕೆ ಸದ್ರಿ ಮದ್ಯದ ಪ್ರತಿ ಬಾಟಲ್‌ಗಳನ್ನು ಖರೀದಿಸಿ ಮಾರಾಟ ಮಾಡುವುದಾಗಿ ತಿಳಿಸಿದನು. ಶೋಧನಾ ಕಾರ್ಯ ಮಾಡಲು ಕೋರ್ಟ್‌ನ ವಾರಂಟ್ ಪಡೆಯಲು ಸಾಧ್ಯವಾಗದೇ ಇರುವುದರಿಂದ ಸರ್ಚ್ ಮೆಮೊವನ್ನು ತಯಾರಿಸಿ ವಾಹನ ಮತ್ತು ಮದ್ಯವನ್ನು ಅಮಾನತುಪಡಿಸಲಾಯಿತು. ಮೋಟಾರ್ ಬೈಕ್ ಸಂಖ್ಯೆ: ಕೆಎ–21–ಜೆ–3289ರ ಮೇಲೆ ಒಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್.ನ 30 ಬಾಸ್ ವಿಸ್ಕಿ ಬಾಟ್ಲಿಗಳಿದ್ದು, ಅದರಲ್ಲಿ ಒಟ್ಟು 5–400 ಲೀಟರ್ ಮದ್ಯ ಇತ್ತು, ಆರೋಪಿಯು ಓಡಿ ಹೋದ ಕಾರಣ ವಾಹನದಲ್ಲಿ ಅಕ್ರಮ ಮದ್ಯ ಸಾಗಾಟ ಮಾಡಿರುವುದು ಖಚಿತವಾದ ಕಾರಣ ಸ್ಥಳದಲ್ಲಿಯೇ ಮಹಜರು ನಡೆಸಿ, ಮಹಜರನ್ನು ನಿಶಾನೆ ಪಿ.1 ಎಂದು, ಸಾಕ್ಷಿ ಸಹಿಯನ್ನು ನಿಶಾನೆ ಪಿ.1(ಎ) ಎಂದು ಗುರುತಿಸಲಾಯಿತು. ಸ್ಥಳದಲ್ಲಿಯೇ ಒಂದು ಬಾಟಲಿಯನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಸೀಲ್ ಮಾಡಲಾಯಿತು. ಮಾದರಿ ಮೊಹರನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ಓಡಿ ಹೋದ ಆರೋಪಿಯ ಹೆಸರು, ವಿಳಾಸವನ್ನು ಸ್ಥಳದಲ್ಲಿದ್ದ ಬಾಲಕೃಷ್ಣ ಎಂಬಾತನು ತಿಳಿಸಿರುತ್ತಾನೆ. ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ ಅದನ್ನು ನಿಶಾನೆ ಪಿ.2 ಎಂದು ಗುರುತಿಸಿ ಸಾಕ್ಷಿಯ ಸಹಿಯನ್ನು ನಿಶಾನೆ ಪಿ.2ಎ ಎಂದು ಗುರುತಿಸಲಾಯಿತು. ವಾಹನದ ಬಗ್ಗೆ ಬಿ ಎಕ್ಸ್‌ಟ್ರ್ಯಾಕ್ಟ್‌ನ್ನು ಪಡೆಯಲಾಗಿದ್ದು, ಅದನ್ನು ನಿಶಾನೆ ಪಿ.3 ಎಂದು ಗುರುತಿಸಲಾಯಿತು. ವಾಹನದ ಮಾಲೀಕರು ತಿಮ್ಮಪ್ಪಗೌಡ ಎಂದು ತಿಳಿದು ಬಂತು. ಮಾದರಿ ಮದ್ಯವನ್ನು ದಿನಾಂಕ:06.03.2008ರಂದು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಿ, ದಿನಾಂಕ:11.04.2008ರಂದು ಪಡೆದ ರಾಸಾಯನಿಕ ವಿಶ್ಲೇಷಣಾ ವರದಿಯಲ್ಲಿ, ವಶಪಡಿಸಿಕೊಂಡ ಮದ್ಯದಲ್ಲಿ 42% ಮದ್ಯಸಾರ

ಇರುವುದು ದೃಢಪಟ್ಟಿದ್ದು, ರಾಸಾಯನಿಕ ವಿಶ್ಲೇಷಣಾ ವರದಿಯನ್ನು ನಿಶಾನೆ ಪಿ.4 ಎಂದು ಗುರುತಿಸಲಾಯಿತು. ಪ್ರಕರಣದ ತನಿಖೆ ನಡೆಸಿ ನ್ಯಾಯಾಲಯಕ್ಕೆ ದೋಷಾರೋಪಣ ಪಟ್ಟಿಯನ್ನು ಸಲ್ಲಿಸಿರುತ್ತೇನೆ. ವಿಚಾರಣಾ ವರದಿಯನ್ನು ಪ್ರಾಧಿಕಾರಕ್ಕೆ ದಿನಾಂಕ:28.05.2008ರಂದು ಸಲ್ಲಿಸಿರುತ್ತೇನೆ. ಅದನ್ನು ನಿಶಾನೆ ಪಿ.5 ಎಂದು, ಸಾಕ್ಷಿ ಸಹಿಯನ್ನು ನಿಶಾನೆ ಪಿ.5ಎ ಎಂದು ಗುರುತಿಸಲಾಯಿತು. ವಶಪಡಿಸಿಕೊಂಡ ಮೋಟಾರ್ ಬೈಕನ್ನು ಗುರುತಿಸುತ್ತೇನೆ. (ಅರ್ಜಿದಾರರು ವಾಹನದ ಮಧ್ಯಂತರ ಸ್ವಾಧೀನ ಪಡೆದುಕೊಂಡು ಈ ದಿನ ನ್ಯಾಯಾಲಯದ ಮುಂದೆ ಹಾಜರುಪಡಿಸಿರುವುದಿಲ್ಲ). ವಶಪಡಿಸಿದ ಮದ್ಯವನ್ನು ನಾಶಪಡಿಸಲು ಮೇಲಾಧಿಕಾರಿಗಳಿಗೆ ವರದಿ ಸಲ್ಲಿಸಿರುತ್ತೇನೆ.

ಪಾಟೀ ಸವಾಲಿಗೆ ಉತ್ತರಿಸುತ್ತಾ ಆರ್.ಸಿ. ಮಾಲೀಕರ ಹೆಸರು ಪ್ರಾದೇಶಿಕ ಸಾರಿಗೆ ಅಧಿಕಾರಿಯವರಿಂದ ನೀಡಲಾಗಿರುವ ವರದಿಯಲ್ಲಿ ಹೆಸರಿಸಿರುವುದಲ್ಲದೆ ಬೇರೆ ಯಾವುದೇ ಕಾರಣ ತಿಳಿದಿರುವುದಿಲ್ಲ. ಅಪರಾಧ ಪತ್ತೆ ಸ್ಥಳವು ತಮ್ಮ ಕಛೇರಿಯಿಂದ ಸುಮಾರು 20 ಕಿ.ಮೀ. ದೂರದಲ್ಲಿರುತ್ತದೆ. ತಾನು ಕರ್ತವ್ಯ ನಿಮಿತ್ತ ಕಛೇರಿಯಲ್ಲಿ ಸಾಮಾನ್ಯವಾಗಿ ಬೆಳಿಗ್ಗೆ 8–30 ರಿಂದ ರಾತ್ರಿ 10–30 ಗಂಟೆಯವರೆಗೆ ಕೆಲವು ಸಂದರ್ಭದಲ್ಲಿರುತ್ತೇನೆ. ತನ್ನ ಕಛೇರಿಯಲ್ಲಿ ಚಲನವಲನ ವಹಿ ಎಂಬ ದಾಖಲೆ ಇರಿಸಿಕೊಂಡಿದ್ದು, ಈ ಕಛೇರಿಯಲ್ಲಿ ತನ್ನ ದೈನಂದಿನ ಕಾರ್ಯಚಟುವಟಿಕೆ ನಮೂದಿಸಲಾಗುತ್ತದೆ. ಈ ಪ್ರಕರಣಕ್ಕೆ ಸಂಬಂಧಿಸಿ ದಾಖಲೆ ತನ್ನ ಕಛೇರಿಯ ಚಲನವಲನ ವಹಿಯಲ್ಲಿ ಕಂಡು ಬರುತ್ತದೆ. ಈ ವಹಿಯ ಮಾಹಿತಿಗಳನ್ನು ಈ ಪ್ರಕರಣದ ವರದಿಯೊಂದಿಗೆ ಈ ಪ್ರಾಧಿಕಾರದಲ್ಲಿ ಸಲ್ಲಿಸಿರುವುದಿಲ್ಲ. ನಮಗೆ ಪ್ರಕರಣ ಪತ್ತೆಯಾದ ರಾತ್ರಿ ಸುಮಾರು 7–30 ಗಂಟೆಗೆ ದೂರವಾಣಿ ಮೂಲಕ ಮಾಹಿತಿ ತಲುಪಿದ್ದು, ಮಾಹಿತಿದಾರರು ಯಾರು ಎಂದು ತಿಳಿದಿರುವುದಿಲ್ಲ. ನಮ್ಮ ಮೇಲಾಧಿಕಾರಿಯಾದ ಅಬಕಾರಿ ಉಪ ಅಧೀಕ್ಷಕರ ಕಛೇರಿ ಪುತ್ತೂರು ಕೇಂದ್ರ ಸ್ಥಾನದಲ್ಲಿದ್ದು, ಕಾಯರ್ ತಡ್ಕ ಎಂಬಲ್ಲಿಗೆ ಸುಮಾರು 15 ಕಿ.ಮೀ. ದೂರವಿರಬಹುದು. ನನಗೆ ದೂರವಾಣಿ ಮೂಲಕ ಮಾಹಿತಿ ತಿಳಿದ ತಕ್ಷಣ ನಾನು ಕಛೇರಿಯಿಂದ ಅಪರಾಧ ಸ್ಥಳಕ್ಕೆ ಹೊರಟಿರುತ್ತೇನೆ. ನಾವು ಬೆಳ್ಳಾರೆ ಪಂಜ ರೂಟಿನಲ್ಲಿ ಹೊರಟಿರುತ್ತೇವೆ.

ನಾವು ಅಪರಾಧ ಸ್ಥಳ ತಲುಪಿದಾಗ ಅಲ್ಲಿ ಸೇರಿದ ಜನರ ಸಂಖ್ಯೆ ಅಂದಾಜಿಸಲು ಸಾಧ್ಯವಿಲ್ಲ. ನಾವು ಪ್ರಥಮ ಬಾರಿಗೆ ಅಪರಾಧ ಸ್ಥಳಕ್ಕೆ ತಲುಪಿ ಜೀಪನ್ನು ನಿಲ್ಲಿಸಿ ಒಂದು ಬೈಕ್ ನಿಂತಿರುವ ಅಂತರ ಸುಮಾರು 20 ಮೀಟರ್ ಆಗಬಹುದು. ಅದನ್ನು ಲೆಫ್ಟ್ ಸೈಡ್ ಸ್ಟ್ಯಾಂಡ್ ಹಾಕಿ ನಿಲ್ಲಿಸಲಾಗಿತ್ತು. ನಾವು ಒಬ್ಬ ವ್ಯಕ್ತಿಯನ್ನು ಆ ಬೈಕ್ ಬಿಟ್ಟು ಸುಮಾರು 5 ಮೀಟರ್ ದೂರದಲ್ಲಿ ತಡೆದು ಹಿಡಿದಿರುತ್ತೇವೆ. ಅವನನ್ನು ಪರಿಶೀಲಿಸಿ ನೋಡಲಾಗಿ, ಅವನ ವಶದಲ್ಲಿ ಒಂದು ಮದ್ಯದ ಬಾಟಲ್ ದೊರೆತಿದ್ದು ಅದನ್ನು ವಶಪಡಿಸಲಾಗಿರುತ್ತದೆ. ಅದನ್ನು ಈ ಮಹಜರಿನಲ್ಲಿ ನಮೂದಿಸಿರುವುದಿಲ್ಲ. ಅಪರಾಧ ಸ್ಥಳದಲ್ಲಿ ಯಾವುದೇ ಅಪರಾಧಕ್ಕೆ ಒಳಪಟ್ಟ ಸೊತ್ತುಗಳು ಜಫ್ತಾದಲ್ಲಿ ಅವುಗಳ ಎಲ್ಲಾ ಮಾಹಿತಿಯನ್ನು ಮಹಜರಿನಲ್ಲಿ ತಿಳಿಸಬೇಕಾಗಿರುವುದು ನಾನು ತಿಳಿದಿರುತ್ತೇನೆ. ನಾವು ವಶಪಡಿಸಿಕೊಂಡ ಸೊತ್ತುಗಳ ಪೈಕಿ 180 ಎಂ.ಎಲ್.ನ ಬಾಸ್ ವಿಸ್ಕಿ ಮಾತ್ರ ಎಂದು ತಿಳಿಸಿದ್ದು, ಅದು ಈ ರಟ್ಟಿನ ಪೆಟ್ಟಿಗೆಯೊಂದಿಗೆ ಜಪ್ತು ಮಾಡಿರುವುದೆಂದು ತಿಳಿಸಿರುವುದಿಲ್ಲ. ನಾನು ಜಪ್ತು ಮಾಡಿರುವ ಅಕ್ರಮ ಮದ್ಯ ಮತ್ತು ಬೈಕ್ ಇದ್ದ ಸ್ಥಳದ ಸುತ್ತಮುತ್ತ ಗೇರು ತೋಟಗಳ ಪರಿಸರವಾಗಿರುತ್ತದೆ. ನಾನು ಅಪರಾಧ ಸ್ಥಳಕ್ಕೆ ಹೋದಾಗ ರಾತ್ರಿ 8–30 ಗಂಟೆಯಾಗಿದ್ದು, ಸುತ್ತಮುತ್ತಲು ಯಾವುದೇ ಪರಿಸರ ನೋಡಲು ಸಾಧ್ಯವಿರುವುದಿಲ್ಲ. ಅಪರಾಧ ಸ್ಥಳದಲ್ಲಿ ನಾವು ಒಂದು ಗಂಟೆ ಇದ್ದೆವು.

ನಾನು ಅಪರಾಧ ಸ್ಥಳಕ್ಕೆ ಹೋಗಿದ್ದು, ಸ್ಥಳದಲ್ಲಿ ಜಫ್ತಾಗಿರುವ ವಾಹನದಿಂದ ಮದ್ಯವನ್ನು ವಶಪಡಿಸಿಕೊಳ್ಳಲಾಗಿದೆ ಎಂಬುವುದು ಸುಳ್ಳು ಎಂಬುವುದು ಸರಿಯಲ್ಲ. ಕಾಯರ್‌ತಡ್ಕ ಎಂಬ ಸ್ಥಳದ ಹತ್ತಿರದ ಗ್ರಾಮ ಬಾಳಿಲವಾಗಿರುತ್ತದೆ. ಆರ್.ಸಿ. ಮಾಲೀಕರು ನಾನು ವಶಪಡಿಸಿಕೊಂಡಿರುವ ಮೋಟಾರ್ ಬೈಕನ್ನು ಅವರ ಗೇರು ತೋಟಕ್ಕೆ ಹೋಗುವಾಗ ಮಧ್ಯಾಹ್ನ 3–00 ಗಂಟೆಗೆ ರಸ್ತೆ ಬದಿ ನಿಲ್ಲಿಸಿ ತೋಟಕ್ಕೆ ಹೋಗಿದ್ದು, ವಾಪಸು ಸುಮಾರು 5–20 ಗಂಟೆಗೆ ಬಂದಾಗ ಅಲ್ಲಿ ಆ ವಾಹನವು ಇರಲಿಲ್ಲ ಎಂಬುದು ತನಗೆ ತಿಳಿದಿರಲಿಲ್ಲ. ಆರ್.ಸಿ. ಮಾಲೀಕರು ತಮ್ಮ ಬೈಕ್ ಮಾಯವಾಗಿರುವ ಬಗ್ಗೆ ವಿಚಾರಿಸಿದ್ದು, ಬೈಕನ್ನು ಅಬಕಾರಿ ಇಲಾಖೆ ಸಿಬ್ಬಂದಿಯವರು ಕೊಂಡು ಹೋಗಿದ್ದಾರೆ ಎಂಬ ಮಾಹಿತಿ ಎಂದು ತಿಳಿದು ತನ್ನ ಕಛೇರಿಗೆ ಅದೇ ದಿವಸ ರಾತ್ರಿ ಬಂದು ಬೈಕ್ ಬಗ್ಗೆ ವಿಚಾರಿಸಿರುವುದು ನನಗೆ ತಿಳಿದಿರುವುದಿಲ್ಲ. ಸದ್ರಿಯವರು ಕಛೇರಿಗೆ ಬಂದಾಗ ನನ್ನ ಸಿಬ್ಬಂದಿಯವರು ಆರ್.ಸಿ. ಮಾಲೀಕರನ್ನು ಮರುದಿವಸ ಬೆಳಿಗ್ಗೆ ಬನ್ನಿ ಎಂಬುವುದಾಗಿ ಹೇಳಿರುವುದು ನನಗೆ ತಿಳಿದಿರುವುದಿಲ್ಲ. ಮರುದಿವಸ ಕೂಡಾ ಆರ್.ಸಿ. ಮಾಲೀಕರು ನಮ್ಮ ಕಛೇರಿಗೆ ಬಂದು ಬೈಕ್‌ನ ಬಗ್ಗೆ ವಿಚಾರಿಸಿದಾಗ, ಮತ್ತೆರಡು ದಿವಸ ನಂತರ ಅವರನ್ನು ಬರಲು ಹೇಳಿರುವ ವಿಷಯ ನನಗೆ ತಿಳಿದಿರುವುದಿಲ್ಲ. ನಂತರ ಎರಡು ದಿವಸ ಕಳೆದು ಆರ್.ಸಿ. ಮಾಲೀಕರು ತನ್ನ ಕಛೇರಿಗೆ ಬಂದು ವಾಹನವನ್ನು ಅವರಿಗೆ ಬಿಟ್ಟುಕೊಡಲು ಕೇಳಿದಾಗ, ಅದನ್ನು ವಿಶ್ವನಾಥ ರೈ ಎಂಬ ವ್ಯಕ್ತಿಯ ಮೇಲೆ ಪ್ರಕರಣ ದಾಖಲಿಸಿ, ಸದ್ರಿ ವ್ಯಕ್ತಿಗೆ ಸಂಬಂಧಿಸಿ ಆ ಬೈಕನ್ನು ಪ್ರಕರಣದಲ್ಲಿ ಒಳಪಡಿಸಲಾಗಿದೆ ಹಾಗೂ ಸದ್ರಿ ವಾಹನವು ವಿಶ್ವನಾಥ ಎಂಬವರ ಮೇಲೆ ಪ್ರಕರಣ ದಾಖಲಿಸಿರುವ ವಾಹನವಾಗಿರುತ್ತದೆ. ನೀವು ಸದ್ರಿ ವಾಹನವನ್ನು ಅಧಿಕೃತ ಅಧಿಕಾರಿಗಳ ಪ್ರಾಧಿಕಾರ, ಮಂಗಳೂರು ಇವರ ಕಛೇರಿಯಿಂದ ಸದ್ರಿ ವಾಹನ ಬಿಡುಗಡೆಗೊಳಿಸಿದೆ ಎಂಬುವುದು ಸರಿಯಲ್ಲ. ವಿಶ್ವನಾಥ ರೈ ಎಂಬವರ ವಿರುದ್ಧ ದಾಖಲಾಗಿರುವ ಪ್ರಕರಣಕ್ಕೂ, ಈ ವಾಹನಕ್ಕೂ ಸಂಬಂಧ ಸುಳ್ಳು ಕೇಸು ಹಾಕಿರುವುದು ಎಂದರೆ ಸರಿಯಲ್ಲ

ಹಾಗೂ ವಾಹನದ ಮಾಲೀಕರಾದ ತಿಮ್ಮಪ್ಪಗೌಡ ಎನ್ನುವವರನ್ನು ಎರಡನೇ ಆರೋಪಿಯನ್ನಾಗಿ ಮಾಡಿ ಸುಳ್ಳು ದೋಷಾರೋಪಣಾ ಪಟ್ಟಿ ಸಲ್ಲಿಸಲಾಗಿದೆ ಎನ್ನುವುದು ಸರಿಯಲ್ಲ. ತಾನು ದಾಖಲಿಸಿರುವ ಪ್ರಕರಣದಲ್ಲಿ ಜಫ್ತಾಗಿರುವ ವಾಹನವಾಗಲೀ, ವಾಹನದ ಮಾಲೀಕರಾಗಲಿ ಪ್ರಕರಣದಲ್ಲಿ ಭಾಗಿಯಾಗಿರುವುದಿಲ್ಲ ಎಂಬುವುದು ಸರಿಯಲ್ಲ. ಪ್ರಕರಣದ ಒಂದನೇ ಆರೋಪಿ ವಿಶ್ವನಾಥ ರೈ ಇವರ ವಾಸ ಸ್ಥಳ ಕಾಣಿಯೂರು–ಪುತ್ತೂರು ತಾಲ್ಲೂಕು ಆಗಿದ್ದು, ಮಾಲೀಕರು ತಿಮ್ಮಪ್ಪಗೌಡ, ಮುರುಳ್ಯ–ಸುಳ್ಯ ತಾಲ್ಲೂಕು ಆಗಿರುತ್ತದೆ. ಆರ್.ಸಿ. ಮಾಲೀಕರು ತನ್ನ ತೋಟದ ಕಾರ್ಯಕ್ಕೆ ಹೋಗಿದ್ದ ಸಂದರ್ಭದಲ್ಲಿ ವಿನಾ ಕಾರಣ ಅವರ ಮೋಟಾರ್ ಸೈಕಲನ್ನು ಜಪ್ತುಪಡಿಸಿ ಸುಳ್ಳು ಕೇಸು ಹಾಕಿದ್ದೀರಿ ಎಂಬುದು ಸರಿಯಲ್ಲ. ತಾನು ಅಪರಾಧ ಸ್ಥಳದಲ್ಲಿ ಒಬ್ಬ ವ್ಯಕ್ತಿಯನ್ನು ಶೋಧಿಸಿ, ಅವನು ಒಂದು ಮದ್ಯದ ಬಾಟಲ್ ಇಟ್ಟುಕೊಂಡಿದ್ದು, ಅದನ್ನು ಜಪ್ತುಪಡಿಸಿದ ಬೈಕ್‌ನ ಮೂಲಕ ಮಾರಾಟ ಮಾಡಲಾಗಿದೆ ಎಂಬ ಸುಳ್ಳು ಪ್ರಕರಣ ದಾಖಲಿಸಲಾಗಿದೆ ಎಂಬುವುದು ಸರಿಯಲ್ಲ. ಜಪ್ತುಪಡಿಸಿರುವ ವಾಹನವು ಅಪರಾಧಕ್ಕೆ ಒಳಪಟ್ಟಿರುವುದಿಲ್ಲ ಎಂಬುವುದು ಸರಿಯಲ್ಲ. ಕೆಲವು ಸಂದರ್ಭಗಳಲ್ಲಿ ಅನಾಮಧೇಯ ಮಾಹಿತಿ ಬಂದು ಸ್ಥಳಕ್ಕೆ ದಾಳಿವೆಸಗಿದ ಸಂದರ್ಭದಲ್ಲಿ ವಾರಸುದಾರರಿಲ್ಲದೆ ದಾಸ್ತಾನು ಇರಿಸಿರುವ ಅಕ್ರಮ ಮದ್ಯ ಸಾರಾಯಿ ಸಿಗುವುದು ಸರ್ವೆ ಸಾಮಾನ್ಯ. ಪ್ರಕರಣವು ಅಂತಹದೇ ಅನಧಿಕೃತ ಮದ್ಯ ದಾಸ್ತಾನಿನ ಬಗ್ಗೆ ಪತ್ತೆಯಾಗಿದ್ದು, ಈ ಬಗ್ಗೆ ವಾಹನವನ್ನು ಜಪ್ತುಪಡಿಸಿ ಸುಳ್ಳು ಕೇಸು ಹಾಕಿರುವುದು ಸರಿಯಲ್ಲ. ಇಂತಹ ಅನಧಿಕೃತವಾಗಿ ಇರಿಸಲಾದ ಸೊತ್ತುಗಳನ್ನು ವಶಪಡಿಸಿಕೊಂಡು ಕಛೇರಿಯಲ್ಲಿರಿಸಿ ಅವುಗಳನ್ನೇ ಈ ಪ್ರಕರಣದಲ್ಲಿ ತೋರಿಸಿ ಸುಳ್ಳು ಕೇಸು ಹಾಕಲಾಗಿದೆ ಎಂಬುವುದು ಸರಿಯಲ್ಲ. ತಾನು ಬೈಕ್‌ನೊಂದಿಗೆ ಅಪರಾಧ ಸ್ಥಳದಲ್ಲಿ ವಶಪಡಿಸಿದ 180 ಎಂ.ಎಲ್.ನ ಬಾಸ್ ವಿಸ್ಕಿ ಎಂಬ ಮದ್ಯ ವಶಪಡಿಸಿಕೊಂಡಿಲ್ಲ ಎಂದರೆ ಸರಿಯಲ್ಲ. ಈ ಪ್ರಕರಣಕ್ಕೆ ಸಂಬಂಧಿಸಿ ನಿಶಾನೆ ಪಿ3 ಮಹಜರನ್ನು ತನ್ನ ಕಛೇರಿಯಲ್ಲಿ ತಯಾರಿಸಿದೆ ಎಂಬುವುದು ಸರಿಯಲ್ಲ. ತಾನು ಆರೋಪಿಗಳ ವಿರುದ್ಧ ಸುಳ್ಳು ಕೇಸು ಮಾಡಿದ್ದೇನೆ ಎಂಬುವುದು ಸರಿಯಲ್ಲ.

ಎದುರುದಾರರ ಪರ ವಕೀಲರು ಕೇಳಿದ ಪ್ರಶ್ನೆಗಳಿಗೆ ಉತ್ತರ ಸಲ್ಲಿಸಿ, ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದಲ್ಲಿ ಯಾವುದೇ ಮದ್ಯ ಮಾರಾಟ ಮತ್ತು ಸಾಗಾಟ ಮಾಡಿಲ್ಲವೆಂಬುದನ್ನು ಅಲ್ಲಗಳೆದಿದ್ದಾರೆ ಹಾಗೂ ಮದ್ಯ ಮಾರಾಟ ಮತ್ತು ಸಾಗಾಟ ಆಗಿರುವುದನ್ನು ದೃಢಪಡಿಸಿರುತ್ತಾರೆ. ಈ ಸಾಕ್ಷಿದಾರರ ಹೇಳಿಕೆಗಳನ್ನು ಪರಿಶೀಲಿಸಿದಾಗ, ಅವುಗಳನ್ನು ನಂಬದೇ ಇರಲು ಸಕಾರಣ ಇಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸಿರುತ್ತೇನೆ. ಅದಲ್ಲದೆ ಸ್ಥಳದಲ್ಲಿ ತಯಾರಿಸಿದ ಮಹಜರು ಮತ್ತು ಪ್ರಕರಣದ ಪ್ರಥಮ ಮಾಹಿತಿ ವರದಿಯು ಈ ಸಾಕ್ಷಿದಾರರ ಹೇಳಿಕೆಯನ್ನು ಪುಷ್ಟೀಕರಿಸುತ್ತೇನೆ. ಆದುದರಿಂದ ಜಪ್ತುಪಡಿಸಿರುವ ವಾಹನದಲ್ಲಿ ಅಕ್ರಮವಾಗಿ ಮದ್ಯ ಮಾರಾಟ ಮತ್ತು ಸಾಗಾಟ ಮಾಡಿರುವುದು ಸ್ಪಷ್ಟವಾಗಿ ಸಾಬೀತಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ, ಮೊದಲನೇ ವಿವಾದಾಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಪ್ರಕರಣದ ಎರಡನೇ ಅಂಶವನ್ನು ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ವಾಹನದಲ್ಲಿ ವಾಹನ ಮಾಲೀಕರಿಗೆ ತಿಳಿಯದೆ ಈ ಕೃತ್ಯವು ಎಸಗಲಾಗಿದೆ ಎಂಬುವುದನ್ನು ಅರ್ಜಿದಾರರು ಸಾಬೀತುಪಡಿಸಬೇಕಾಗಿದ್ದು, ಅರ್ಜಿದಾರರನ್ನು ವಿಚಾರಣೆಗೆ ಹಾಜರುಪಡಿಸಿರುತ್ತಾರೆ. ಅವರ ಹೇಳಿಕೆಯನ್ನು ಈ ಕೆಳಗಿನಂತೆ ಪ್ರಾಧಿಕಾರವು ಪಡೆದಿರುತ್ತದೆ.

**ಡಿಡಬ್ಲ್ಯೂ–1**

ವಾಹನ ಮಾಲೀಕರಾದ ಶ್ರೀ ಕೆ. ತಿಮ್ಮಪ್ಪಗೌಡ ಇವರು ದಿನಾಂಕ:28.01.2009ರಂದು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿಯುತ್ತಾ, ತಾನು ಕೆಎ–21–ಜೆ–3289 ಸಂಖ್ಯೆಯ ಮೋಟಾರ್ ಬೈಕ್ ಇದರ ಆರ್.ಸಿ. ಮಾಲೀಕನಾಗಿದ್ದೇನೆ. ತಾನು ಕೃಷಿಕನಾಗಿರುತ್ತೇನೆ. ಗೇರು ಹಾಗೂ ಗೇರುಬೀಜದ ಗುತ್ತಿಗೆ ಕಸಬು ಮಾಡುವವನಾಗಿರುತ್ತೇನೆ. ತಾನು ಸುಮಾರು ಒಂದು ವರ್ಷ ಹಿಂದೆ ದಿನಾಂಕ:26.02.2002 ರಂದು ತನ್ನ ಮೋಟಾರು ಬೈಕನ್ನು ಮಾಳ ಎಂಬ ಊರಿನ ರಸ್ತೆ ಬದಿ ನಿಲುಗಡೆಗೊಳಿಸಿ ತನ್ನ ಸ್ವಂತ ಸ್ಥಳಕ್ಕೆ ಬಾಳಿಲ ಎಂಬ ಸ್ಥಳಕ್ಕೆ ಹೋಗಿರುತ್ತೇನೆ. ತಾನು ಸಾಯಂಕಾಲ ಹಿಂತಿರುಗಿ ಬಂದಾಗ ತಾನು ನಿಲುಗಡೆಗೊಳಿಸಿದ ಸ್ಥಳದಲ್ಲಿ ತನ್ನ ವಾಹನ ಇರಲಿಲ್ಲ. ತಾನು ಸ್ಥಳೀಯರಲ್ಲಿ ಬೈಕಿನ ಬಗ್ಗೆ ತಿಳಿಸಿದಾಗ, ನಿಲುಗಡೆಗೊಳಿಸಿದ ಬೈಕನ್ನು ಅಬಕಾರಿ ಇಲಾಖೆಯವರು ಕೊಂಡುಹೋಗಿದ್ದಾರೆ ಎಂದು ತಿಳಿಸಿದರು. ತಾನು ನಂತರ ಸುಳ್ಯ ಪೇಟೆಗೆ ಬಂದು ಅಬಕಾರಿ ಇಲಾಖಾ ಕಛೇರಿಗೆ ಹೋಗಿ ತನ್ನ ಬೈಕನ್ನು ಅಲ್ಲಿ ನೋಡಲಾಗಿ, ಕಛೇರಿಯಲ್ಲಿ ಬೈಕ್ ಇರುವುದು ಕಂಡು, ಅಬಕಾರಿ ಅಧಿಕಾರಿಯವರಲ್ಲಿ ಸದ್ರಿ ಬೈಕನ್ನು ತನ್ನ ಸುಪರ್ಧಿಗೆ ನೀಡುವಂತೆ ಕೇಳಿಕೊಂಡಿದ್ದು, ಕಾನೂನು ರೀತಿಯಲ್ಲಿ ಬಿಡುಗಡೆಗೊಳಿಸಬೇಕಾಗಿ ತಿಳಿಸಿರುತ್ತಾರೆ. ಎರಡು ತಿಂಗಳ ನಂತರ ತನ್ನ ವಾಹನಕ್ಕೆ ಬ್ಯಾಂಕ್ ಭದ್ರತೆ ನೀಡಿದಲ್ಲಿ ಮಧ್ಯಂತರ ಬಿಡುಗಡೆ ನೆಲೆಯಲ್ಲಿ ಪಡೆದುಕೊಳ್ಳಬಹುದಾಗಿ ನೋಟೀಸು ಬಂದಿರುತ್ತದೆ. ಆ ದಿವಸ ಅಂದರೆ ದಿನಾಂಕ:26.02.2002 ರಂದು ಮಧ್ಯಾಹ್ನ ತಾನು ಸದ್ರಿ ಬೈಕನ್ನು ರಸ್ತೆಬದಿಯಲ್ಲಿ ನಿಲ್ಲಿಸಿ, ಸಾಯಂಕಾಲ ಸುಮಾರು 6 ಗಂಟೆಗೆ ವಾಪಾಸ್ಸು ಆ ಸ್ಥಳಕ್ಕೆ ಬಂದಿರುತ್ತೇನೆ. ಈ ಪ್ರಕರಣಕ್ಕೆ ಸಂಬಂಧಿಸಿರುವ ಆರೋಪಿಯಾದ ವಿಶ್ವನಾಥ ರೈಯವರ ಪರಿಚಯ ತನಗಿರಲಿಲ್ಲ. ತಾನು ತನ್ನ ಬೈಕಿನಲ್ಲಿ ಯಾವುದೇ ಸಾರಾಯಿಯನ್ನು ಕೊಂಡುಹೋಗಿರುವುದಿಲ್ಲ. ತನ್ನ ಮೋಟಾರು ಬೈಕನ್ನು ತಾನೇ ಸ್ವತಃ ಚಲಾಯಿಸಿಕೊಂಡಿದ್ದು, ಯಾರಿಗೂ ಉಪಯೋಗಿಸಲು ನೀಡಿರುವುದಿಲ್ಲ. ಈ ದಿನ ಸದ್ರಿ ವಾಹನವನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತೇನೆ. ತಾನು ಯಾವುದೇ ತಪ್ಪು ಮಾಡಿರುವುದಿಲ್ಲ. ತನ್ನ ವಾಹನವನ್ನು ತನಗೆ ಖಾಯಂ ಆಗಿ ಬಿಡುಗಡೆಗೊಳಿಸಬೇಕಾಗಿ ಕೇಳಿಕೊಳ್ಳುತ್ತೇನೆ.

ಪಾಟೀ ಸವಾಲಿಗೆ ಉತ್ತರಿಸುತ್ತಾ ವಿಶ್ವನಾಥ ರೈಯವರು ಪ್ರಕರಣದ ಆರೋಪಿಯ ಅಣ್ಣ–ಸೀತಾರಾಮ ರೈ ಎಂಬವರ ಪರಿಚಯ ತನಗೆ 15 ವರ್ಷಗಳಿಂದ ಇರುತ್ತದೆ. ಅವರು ಹೋಟೆಲ್ ಉದ್ಯಮ ನಡೆಸುತ್ತಿದ್ದರು. ವಿಶ್ವನಾಥ ರೈಯವರು ಏನು ಉದ್ಯೋಗ ಮಾಡುತ್ತಾರೆ ಎಂಬುವುದು ತನಗೆ ಗೊತ್ತಿಲ್ಲ. ತನಗೆ 2 ಎಕರೆ 80 ಸೆನ್ಸ್ ಜಾಗದಲ್ಲಿ ಅಡಿಕೆ–ಗೇರು ತೋಟವಿದೆ. ತನ್ನ ಮನೆಯಲ್ಲಿ ತನ್ನ ಹೆಂಡತಿ ಮತ್ತು 3 ಮಕ್ಕಳಿದ್ದು, ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ತನಗೆ ಅಡಿಕೆ ತೋಟದಿಂದ ವರ್ಷಕ್ಕೆ 8 ಕ್ವಿಂಟಾಲ್ ಅಡಿಕೆ ಬರುತ್ತದೆ. ಕ್ವಿಂಟಾಲ್‌ಗೆ ರೂ.6,000/– ರಂತೆ ಸರಾಸರಿ ಬೆಲೆ ಇರುತ್ತದೆ. ಕೃಷಿ ಖರ್ಚೆಲ್ಲಾ ತೆಗೆದು ತನಗೆ ವರ್ಷಕ್ಕೆ ರೂ.10,000/– ಉಳಿತಾಯವಾಗುತ್ತದೆ. ತನ್ನ ಮೊದಲನೇ ಮಗ ಡಿಗ್ರಿ ಮಾಡಿ ಕಂಪ್ಯೂಟರ್ ಕೋರ್ಸ್ ಮಾಡುತ್ತಿದ್ದಾನೆ. ಎರಡನೇ ಮಗ ಫ್ಯಾಶನ್ ಡಿಸೈನ್ ಕೋರ್ಸ್ ಮಾಡುತ್ತಿದ್ದಾನೆ. ತನ್ನ ಮಗಳು ಕೂಡಾ ಫ್ಯಾಶನ್ ಡಿಸೈನ್ ಕ್ಲಾಸಿಗೆ ಹೋಗುತ್ತಿದ್ದಾಳೆ. ತನ್ನ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ತಾನು ವಿದ್ಯಾಭ್ಯಾಸ ಸಾಲ ರೂ.2,00,000/– ಪಡೆದಿರುತ್ತೇನೆ. ತನಗೆ ಕೃಷಿ ಬಿಟ್ಟರೆ ಬೇರೆ ಉದ್ಯೋಗವಿಲ್ಲ. ತನ್ನ ಕೃಷಿ ಉತ್ಪನ್ನ ತನ್ನ ಮಕ್ಕಳ ವಿದ್ಯಾಭ್ಯಾಸಕ್ಕೆ ಸಾಕಾಗುವುದಿಲ್ಲ ಎಂದರೆ ಸರಿ, ತಾನು ತೆಗೆದ ಸಾಲವನ್ನೂ ಸಹಾ ಕೃಷಿ ಉತ್ಪನ್ನದಿಂದಲೇ ತೀರಿಸುತ್ತಿದ್ದೇನೆ. ತನ್ನ ಕೃಷಿ ಉತ್ಪನ್ನ ಆದಾಯದಿಂದ ತಾನು ಪಡೆದಿರುವ ಸಾಲಗಳಿಗೆ ಕಂತು ಕಟ್ಟಲು ಕಷ್ಟವಾಗುತ್ತದೆ ಎಂದರೆ ಸರಿ. ತನ್ನ ಕೃಷಿ ಉತ್ಪನ್ನದಿಂದ ಸಾಲ ತೀರಿಸಲು ಸಾಕಾಗದೆ ತಾನು ಅಕ್ರಮ ಮದ್ಯ ಮಾರಾಟ ಮಾಡಲು ಪ್ರಾರಂಭಿಸಿದ್ದೇನೆ ಎಂದರೆ ಸರಿಯಲ್ಲ. ಒಂದೇ ಕಡೆ ಅಕ್ರಮ ಮದ್ಯ ಮಾರಾಟ ಮಾಡಿದಲ್ಲಿ ಅಬಕಾರಿ ದಾಳಿ ಆಗುತ್ತದೆ ಎಂದು ತಾನು ತನ್ನ ಬೈಕಿನಲ್ಲಿ ದಿನವೂ ಒಂದೊಂದು ಸ್ಥಳದಲ್ಲಿ ಅಕ್ರಮ ಮದ್ಯ ಮಾರಾಟ ಮಾಡುತ್ತಿದ್ದೇನೆ ಎಂದರೆ ಸರಿಯಲ್ಲ. ಅಕ್ರಮ ಮದ್ಯ ಮಾರಾಟ ಮಾಡಲು ವಿಶ್ವನಾಥ ರೈಯನ್ನು ನಾನು ನೇಮಿಸಿದ್ದೇನೆ ಎಂದರೆ ಸರಿಯಲ್ಲ. ದಿನಾಂಕ:26.02.2002ರಂದು ವಿಶ್ವನಾಥ ರೈಯವರಿಗೆ ಬೈಕ್ ಕೊಟ್ಟು ಮದ್ಯ ಮಾರಾಟ ಮಾಡಲು ತಾನೇ ಕಳುಹಿಸಿದ್ದೆ ಎಂದರೆ ಸರಿಯಲ್ಲ. ಆ ದಿನ ಕಾಯರ್‌ತಡ್ಕ ಎಂಬಲ್ಲಿ ವಿಶ್ವನಾಥ ರೈ ಬೈಕಿನ ಮೇಲೆ ಮದ್ಯದ ರಟ್ಟಿನ ಪೆಟ್ಟಿಗೆ ಇಟ್ಟುಕೊಂಡು ಮಾರಾಟ ಮಾಡುತ್ತಿದ್ದಾರೆ ಎಂದರೆ ತನಗೆ ಗೊತ್ತಿಲ್ಲ. ಮದ್ಯ ಮಾರಾಟ ಮಾಡುವ ಸಮಯದಲ್ಲಿ ಅಬಕಾರಿ ಇಲಾಖೆಯವರು ದಾಳಿ ಮಾಡಿ ಬೈಕನ್ನು ಮದ್ಯ ಸಮೇತ ಅಮಾನತು ಮಾಡಿರುವರು ಎಂದರೆ ತನಗೆ ಗೊತ್ತಿಲ್ಲ. ವಿಶ್ವನಾಥ ರೈ ಯವರು ದಾಳಿ ಸಮಯ ತಪ್ಪಿಸಿಕೊಂಡು ಓಡಿಹೋದರು ಎಂದರೆ ತನಗೆ ಗೊತ್ತಿಲ್ಲ.

ಸುಳ್ಯ ನ್ಯಾಯಾಲಯಕ್ಕಾಗಲೀ, ಅಬಕಾರಿ ಇಲಾಖೆಯವರಿಗಾಗಲೀ ತನ್ನ ಬೈಕನ್ನು ಅಬಕಾರಿ ಅಧಿಕಾರಿಗಳು ವಿನಾಕಾರಣ ಅಮಾನತ್ತು ಮಾಡಿಕೊಂಡಿರುತ್ತಾರೆ ಎಂದು ತಾನು ದೂರು ಸಲ್ಲಿಸಿರುವುದಿಲ್ಲ. ಸದರಿ ದಿನ ತಾನು ತನ್ನ ಬೈಕನ್ನು ವಿಶ್ವನಾಥ ರೈಗೆ ಮದ್ಯ ಮಾರಾಟ ಮಾಡಲು ಕೊಟ್ಟಿದ್ದೆ ಎಂದರೆ ಸರಿಯಲ್ಲ. ವಾಹನವನ್ನು ಮುಟ್ಟುಗೋಲು ನಡವಳಿಯಿಂದ ಬಿಡುಗಡೆ ಮಾಡಿಸಲು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ.

ಅಬಕಾರಿ ಅಧಿಕಾರಿಗಳು ಈ ಪ್ರಕರಣದಲ್ಲಿ ಸುಳ್ಳು ಪ್ರಕರಣವನ್ನು ಸೃಷ್ಟಿ ಮಾಡಲು ಯಾವುದೇ ಕಾರಣವಿರುವುದು ಸಾಕ್ಷ್ಯಾಧಾರ ಮತ್ತು ದಾಖಲಾತಿಗಳಿಂದ ಕಂಡು ಬರುವುದಿಲ್ಲ. ಅದರಂತೆ ಅಭಿಯೋಜಕರ, ಪ್ರಾ.ಸಾ–1 ರ ಹೇಳಿಕೆಗಳು ಮತ್ತು ಹಾಜರುಪಡಿಸಲಾದ ದಾಖಲೆಗಳು ಈ ಪ್ರಕರಣದ ಆರೋಪಗಳು ನಿಸ್ಸಂದೇಹವಾಗಿ ಸಾಬೀತುಪಡುತ್ತದೆ. ಈ ಕಾರಣಗಳಿಂದ ವಾಹನದ ಮಾಲೀಕರು ತನಗೆ ತಿಳಿಯದೆ ವಾಹನವನ್ನು ಅಕ್ರಮ ಮದ್ಯ ಮಾರಾಟ ಮತ್ತು ಸಾಗಾಣಿಕೆಗೆ ಉಪಯೋಗಿಸಲ್ಪಟ್ಟಿದೆ ಎಂಬುವುದನ್ನು ಸಾಬೀತುಪಡಿಸಲು ಪ್ರಾಧಿಕಾರದ ಮುಂದೆ ನಡೆಸಲಾದ ರಕ್ಷಣಾ ಸಾಕ್ಷಿ ವಿಚಾರಣೆ ಹೇಳಿಕೆಯಲ್ಲಿ ತಿಳಿಸಿರುತ್ತಾರೆ. ಈ ಕಾರಣದಿಂದ ಎರಡನೇ ವಿವಾದಾಂಶವನ್ನು ಸಕಾರಾತ್ಮಕವಾಗಿ ಪರಿಗಣಿಸಬಹುದಾಗಿದೆ.

ದಿನಾಂಕ:26.02.2008ರಂದು ಅಬಕಾರಿ ಉಪ ನಿರೀಕ್ಷಕರು ದಾಳಿ ನಡೆಸಿದ ಸಂದರ್ಭದಲ್ಲಿ ವಶಪಡಿಸಿಕೊಂಡಿರುವ 180 ಎಂ.ಎಲ್.ನ 30 ಬಾಟ್ಲಿ ಮದ್ಯವನ್ನು ಅವರು ವಶಪಡಿಸಿಕೊಂಡಿರುವ ಮೋಟಾರ್ ಬೈಕ್‌ನಿಂದಲೇ ವಶಪಡಿಸಿಕೊಳ್ಳಲಾಗಿದೆ ಎಂಬುವುದರ ಬಗ್ಗೆ ಸ್ಥಳ ಮಹಜರ್‌ನಲ್ಲಿ ಕೇವಲ ಇಲಾಖಾ ಸಿಬ್ಬಂದಿಗಳು ಮಾತ್ರ ಸಹಿ ಮಾಡಿದ್ದು, ಸ್ಥಳದಲ್ಲಿಯೇ ಹಾಜರಿದ್ದ ಯಾವೊಬ್ಬರೂ ಖಾಸಗಿ ಸಾಕ್ಷಿದಾರರನ್ನು ಪಡೆಯದಿರುವುದು ಸಂಶಯಕ್ಕೆ ಆಸ್ಪದವಾಗಿದ್ದು, ರಸ್ತೆ ಬದಿಯಲ್ಲಿ ನಿಲ್ಲಿಸಲಾಗಿದ್ದ ಬೈಕ್‌ನಿಂದ ಸದರಿ ಮದ್ಯವನ್ನು ವಶಪಡಿಸಿಕೊಳ್ಳಲಾಗಿದೆ ಎಂಬುವುದರ ಬಗ್ಗೆ ಯಾವುದೇ ಸ್ಪಷ್ಟ ಸಾಕ್ಷ್ಯಾಧಾರಗಳು ಇಲ್ಲದಿದ್ದು, ಸ್ಥಳದಲ್ಲಿ ಆರೋಪಿ ಯಾರು ಎಂಬುವುದು ತಿಳಿಯದೇ ಬೇರೊಬ್ಬ ವ್ಯಕ್ತಿಯು ನೀಡಿರುವ ಹೇಳಿಕೆಯಂತೆ ವಿಶ್ವನಾಥ ರೈ ಎಂಬುವರನ್ನು ಆರೋಪಿಯೆಂದು ಗುರುತಿಸಿರುವ ಮಾತ್ರಕ್ಕೆ ವಾಹನವನ್ನು ಸದರಿ ಮದ್ಯದ ಸಾಗಾಣಿಕೆಗೆ ಬಳಸಲಾಗಿದೆ ಎಂಬ ಬಗ್ಗೆ ನಂಬಲು ಸಾಧ್ಯವಾಗುವುದಿಲ್ಲ ಎಂಬ ತೀರ್ಮಾನಕ್ಕೆ ಬರಬಹುದಾಗಿದೆ.

ಈ ಎಲ್ಲಾ ಕಾರಣಗಳು ಮತ್ತು ಪುರಾವೆಗಳಿಂದ ಈ ಪ್ರಕರಣದಲ್ಲಿ ಜಪ್ತುಗೊಳಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತ ಸಾಕ್ಷ್ಯಾಧಾರಗಳು ಇಲ್ಲದಿರುವುದು ಮನವರಿಕೆಯಾಗಿರುವುದರಿಂದ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/346/ಡಿಟಿಸಿಆರ್/2007–08, ದಿನಾಂಕ:28ನೇ ಫೆಬ್ರವರಿ, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಾಲಂ 43ಎ ರಡಿಯಲ್ಲಿ ಪ್ರದತ್ತವಾದ

ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು (ನಂ.1) ಜಾರಿ ಮತ್ತು ತನಿಖೆ, ಸುಳ್ಯ ಇವರ ತಕ್ಷೀರು ಸಂಖ್ಯೆ:15/2007–08 ದಿನಾಂಕ:26.02.2008ರಲ್ಲಿ ಜಪ್ತುಪಡಿಸಿರುವ ವಾಹನ ಮೋಟಾರು ಬೈಕ್ ಸಂಖ್ಯೆ: ಕೆಎ–21–ಜೆ–3289 (ಟಿ.ವಿ.ಎಸ್.ವಿಕ್ಟರ್ ಜಿ.ಎಸ್.) ನ್ನು ಆರ್.ಸಿ. ಮಾಲೀಕರಾದ ಶ್ರೀ ತಿಮ್ಮಪ್ಪಗೌಡ ಬಿನ್ ವೆಂಕಣ್ಣಗೌಡ, ಖದೀರ್ ಹೌಸ್, ಮುರುಳ್ಯ ಮನೆ, ಸುಳ್ಯ ಇವರ ಪರ ಬಿಡುಗಡೆಗೆ ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿನಾಂಕ:02.08.2008ರಂದು ವಾಹನ ಬಿಡುಗಡೆಗೊಳಿಸಿ ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆ ಆದೇಶವನ್ನು ರದ್ದುಗೊಳಿಸಿ, ಆರ್.ಸಿ. ಮಾಲೀಕರು ಮಧ್ಯಂತರ ಬಿಡುಗಡೆ ಹೊಂದಿರುವ ಮೋಟಾರು ಬೈಕ್ ಸಂಖ್ಯೆ: ಕೆಎ–21–ಜೆ–3289 (ಟಿ.ವಿ.ಎಸ್. ವಿಕ್ಟರ್ ಜಿ.ಎಸ್.) ಕ್ಕೆ ಸಂಬಂಧಿಸಿ ಈ ಪ್ರಾಧಿಕಾರಕ್ಕೆ ಒಪ್ಪಿಸಿರುವ ಭದ್ರತೆ ಬ್ಯಾಂಕ್ ಗ್ಯಾರಂಟಿ ಪತ್ರವನ್ನು ಹಿಂದಕ್ಕೆ ನೀಡಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:28.02.2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

ಪ್ರಾ.ಸಾ.–1–ಶ್ರೀ ಕೃಷ್ಣ ನಾಯಕ್, ಅಬಕಾರಿ ಉಪ ನಿರೀಕ್ಷಕರು (ನಂ.1), ಸುಳ್ಯ ವಲಯ

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1: ಸ್ಥಳ ಮಹಜರ ಪ್ರತಿ
ನಿಶಾನೆ ಪಿ–2: ಪ್ರಥಮ ಮಾಹಿತಿ ವರದಿ ಪ್ರತಿ
ನಿಶಾನೆ ಪಿ–3: ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಪ್ರತಿ
ನಿಶಾನೆ ಪಿ–4: ರಾಸಾಯನಿಕ ತಜ್ಞರ ವರದಿ ಪ್ರತಿ
ನಿಶಾನೆ ಪಿ–5: ದೋಷಾರೋಪಣ ಪಟ್ಟಿಯ ಪ್ರತಿ.
ನಿಶಾನೆ ಪಿ–5(ಎ): ದೋಷಾರೋಪಣ ಪಟ್ಟಿಯಲ್ಲಿ ಸಹಿ ಇರುವ ಪ್ರತಿ.

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು
ಡಿಡಬ್ಲ್ಯೂ–1: ಶ್ರೀ ಕೆ. ತಿಮ್ಮಪ್ಪ ಗೌಡ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಪಿ.ಆರ್.239 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಹಾವೇರಿ

## ಪ್ರಕಟಣೆ

**ಸಂಖ್ಯೆ: ಜಿಸಕಅ/ಎಸ್–4/ಕಾ.ಪ.ತ/ಸಿಆರ್.09–10/187, ದಿನಾಂಕ:10ನೇ ಜೂನ್, 2009**

**ವಿಷಯ:** 2009–10ನೇ ಸಾಲಿಗಾಗಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಕುರಿತು.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: SWL-68/SEW-89, ಬೆಂಗಳೂರು, ದಿನಾಂಕ:02.11.1990.
2) ಸರ್ಕಾರಿ ಆದೇಶ ಸಂಖ್ಯೆ: ಸಕಇ:421:ಪಕವಿ:95:ದಿನಾಂಕ:29.07.1997.
3) ಸರ್ಕಾರದ ಆದೇಶ ಸಂಖ್ಯೆ: ಸಕಇ:349:ಪಕವಿ:05: ದಿನಾಂಕ:28.01.2006.

2009–10ನೇ ಸಾಲಿಗಾಗಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ನೀಡುವ ಕುರಿತು ಉಲ್ಲೇಖದಲ್ಲಿ ನಮೂದಿಸಿದ ಸರ್ಕಾರಿ ಆದೇಶಗಳನ್ವಯ ಅರ್ಹ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

| | | |
|---|---|---|
| 2 | ಎನ್. ಚನ್ನಬಸಪ್ಪ ತಾಲ್ಲೂಕು ಶಿರಸ್ತೇದಾರ್ | ಸಿಬ್ಬಂದಿ ಆಡಳಿತ, ಆದಾಯ ಪತ್ರಗಳು, ಬರಪರಿಹಾರ ಅಂತ್ಯ ಸಂಸ್ಕಾರ, ಎಜಿ ಆಡಿಟ್, ಕಚೇರಿ ತಪಾಸಣೆ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರ ಭೂ ಸಕ್ರಮೀಕರಣ ದರಖಾಸ್ತು ಪಿಎಎಲ್ ಹೆಚ್‌ಓಎ ಇತರೆ ಶಾಖೆಗಳ ಮೇಲ್ವಿಚಾರಣೆ |
| 3 | ಸಿ.ಹೆಚ್. ಸೂಲಯ್ಯ, ಆರ್.ಆರ್. ಶಿರಸ್ತೇದಾರ್ | ಹಕ್ಕುಬದಲಾವಣೆಗೆ ಸಂಬಂಧಿಸಿದ ಕಡತಗಳು ಭೂ ಸುಧಾರಣೆ ಶಾಖೆಗೆ ಸಂಬಂಧಿಸಿದ ಕಡತ ಮೇಲ್ವಿಚಾರಣೆ ಗಣಕ ಶಾಖೆ, ಹಕ್ಕು ದಾಖಲೆ, ಸಿಎಆರ್ ಬಾಂಡು ಕಲ್ಲುಗಳ ವಿವಾದ ತಕರಾರು ಪ್ರಕರಣಗಳ ವಿಚಾರಣೆ ಆರ್.ಎ. ಶಾಖೆಯ ಮೇಲ್ವಿಚಾರಣೆ ಕೆಲಸ |
| 4 | ಎಸ್. ವಿಜಯಕುಮಾರ್, ಚುನಾವಣೆ ಶಿರಸ್ತೇದಾರ್ | ಚುನಾವಣಾ ಶಾಖೆಯ, ಮೇಲ್ವಿಚಾರಣೆ ಕೆಲಸ ನಿರ್ವಹಣೆ |
| 5 | ಟಿ.ಕೆ. ಲಕ್ಷ್ಮೀನಾರಾಯಣರೆಡ್ಡಿ, ಆಹಾರ ಶಿರಸ್ತೇದಾರ್ | ಆಹಾರ, ಶಾಖೆಯ ಕೆಲಸ ನಿರ್ವಹಣೆ ಬಗ್ಗೆ ಮೇಲ್ವಿಚಾರಣೆ |
| 6 | ಜಿ.ವಿ. ಬಸವರಾಜು ಹೆಚ್ಚುವರಿ ಶಿರಸ್ತೇದಾರ್ | ಓಎಪಿ ಪಿಹೆಚ್ ಪಿ, ಡಿಡಬ್ಲ್ಯೂಪಿ, ಹಾಗೂ 3 ಹೋಬಳಿಯ ಜಾತಿ ಮತ್ತು ಆದಾಯ ಪತ್ರಗಳು, ಅಂಕಿಅಂಶಗಳ ತಯಾರಿಕೆ ಬಗ್ಗೆ ಮೇಲ್ವಿಚಾರಣೆ |
| 7 | ಎಂ. ಚನ್ನಪ್ಪ ಉಪತಹಶೀಲ್ದಾರ್, ನಾಡಕಚೇರಿ | ನಗರಗೆರೆ ಹೋಬಳಿಯ ರಾಜಸ್ವ ನಿರೀಕ್ಷಕರು ಗ್ರಾಮಲೆಕ್ಕಿಗರ ಕೆಲಸಗಳ ಮೇಲ್ವಿಚಾರಣೆ ಹಕ್ಕುದಾಖಲೆ ತಕರಾರು ಪ್ರಕರಣಗಳ ವಿಚಾರಣೆ, ಓಎಪಿ, ಪಿಹೆಚ್‌ಪಿ, ಡಿಡಬ್ಲ್ಯೂಪಿ,. ಎಸ್‌ಎಸ್‌ವೈ ಮಂಜೂರಾತಿ |
| 8 | ಟಿ.ಎ. ಶ್ರೀನಿವಾಸಮೂರ್ತಿ, ರಾ.ನಿ. ಕಸಬಾ | ಕಸಬಾ ಹೋಬಳಿಯ ಕಂದಾಯ ವಸೂಲಿ, ಹಾಗೂ ಸ್ಥಳ ತನಿಖೆಗಳು, ಕಡತಗಳ ವಿಲೇವಾರಿ, ಗ್ರಾಮಲೆಕ್ಕಿಗರ ಕೆಲಸಗಳ ಮೇಲ್ವಿಚಾರಣೆ |
| 9 | ದಸ್ತಗಿರಿಸಾಬ್, ರಾ.ನಿ. ತೊಂಡೇಭಾವಿ | ತೊಂಡೇಬಾವಿ ಹೋಬಳಿ ಎಲ್ಲಾ ಕಂದಾಯ ವಸೂಲಿ ಹಾಗೂ, ಸ್ಥಳ ತನಿಖೆಗಳು, ಕಡತಗಳ ವಿಲೇವಾರಿ, ಗ್ರಾಮಲೆಕ್ಕಿಗರ ಕೆಲಸಗಳ ಮೇಲ್ವಿಚಾರಣೆ |
| 10 | ಬಿ.ಜಿ. ರಂಗಧಾಮಯ್ಯ, ರಾ.ನಿ. ಹೊಸೂರು– | ಹೊಸೂರು ಹೋಬಳಿ –,,– |
| 11 | ಎನ್. ತಿಮ್ಮಯ್ಯ,. ರಾ.ನಿ. ನಗರಗೆರೆ | ನಗರಗೆರೆ ಹೋಬಳಿ – ,,– |
| 12 | ಬಾಬುಸಾಹೇಬ್, ರಾ.ನಿ. ಮಂಚೇನಹಳ್ಳಿ | ಮಂಚೇನಹಳ್ಳಿ ಹೋಬಳಿ –,,– |
| 13 | ಜಿ.ವಿ. ನಾರಾಯಣಪ್ಪ, ರಾ.ನಿ.ಡಿ. ಪಾಳ್ಯ | ಡಿ. ಪಾಳ್ಯ ಹೋಬಳಿ –,,– |
| 14 | ಷೇಕ್ ಮಹಬೂಬ್ ಪ್ರ.ದ.ಸ. | ಎಂಎಜಿ, ಮೈನ್ಸ್ ದಫ್ತರ್, ರಾಜಸ್ವ, ನಿರೀಕ್ಷಕರು ಮತ್ತು ಗ್ರಾಮಲೆಕ್ಕಿಗರ ದಿನಚರಿ ಪರಿಶೀಲನೆ ಆರ್‌ಸಿ, ಗನ್‌ಲೈಸೆನ್ಸ್ ಡಿಸಿಬಿ, ಎಂಎಸ್ ಸಿ (ಆರ್) |
| 15 | ಜಿ.ವಿ. ತುಳಸಿ ಪ್ರ.ದ.ಸ. | ಜಿಲ್ಲಾಧಿಕಾರಿಗಳು ಚಿಕ್ಕಬಳ್ಳಾಪುರ ರವರ ಕಚೇರಿಗೆ ನಿಯೋಜನೆ ಮಾಡಿಕೊಂಡಿರುತ್ತಾರೆ. |
| 16 | ಸಿ. ಜನಾರ್ಧನ್ ಪ್ರ.ದ.ಸ. | ಅಭಿಲೇಖಾಲಯ ನಿರ್ವಹಣೆ ಪೀಠೋಪಕರಣ ಲೇಖನಸಾಮಗ್ರಿಗಳ ದಾಸ್ತಾನು ವಹಿ ನಿರ್ವಹಣೆ, ವಾಹನದ ಲಾಗ್ ಬುಕ್ ನಿರ್ವಹಣೆ ವಿದ್ಯುತ್ ಹಾಗೂ ದೂರವಾಣಿ ಬಿಲ್ ಪಾವತಿ |
| 17 | ಹೆಚ್.ಎಸ್. ನರಸಿಂಹಮೂರ್ತಿ ಪ್ರ.ದ.ಸ | ದರಖಾಸ್ತು ಮತ್ತು ಎಲ್‌ಆರ್‌ಎಫ್ ಶಾಖೆ ನಿರ್ವಹಣೆ |
| 18 | ಎಂ.ಎನ್. ಉಷಾದೇವಿ, ದ್ವಿ.ದ.ಸ. | ಸಿಬ್ಬಂದಿ ಶಾಖೆಯ ವಿಷಯ ನಿರ್ವಹಣೆ, ಹೆಚ್‌ಓಎ ಶಾಖೆಯ ಬಿಲ್ ತಯಾರಿಕೆ |

| | | |
|---|---|---|
| 19 | ವಿ. ಪದ್ಮ ದ್ವಿ.ದ.ಸ | ಆಮದು ಮತ್ತು ರವಾನೆ ಶಾಖೆ |
| 20 | ಆರ್. ಲಕ್ಷ್ಮೀದೇವಿ | ಐಆರ್‌ಆರ್ ಆರ್‌ಆರ್‌ಟಿ–3 ಹೋಬಳಿ, ಹೆಚ್‌ಒಎ ಪಿಟಿಸಿಎಲ್ ಶಾಖೆಗಳ |
| 21 | ಕೆ.ಎನ್. ಸುಜಾತಮ್ಮ, ದ್ವಿ.ದ.ಸ. | ಎಲ್‌ಎಕ್ಯು, ಡಿಡಬ್ಲ್ಯೂಪಿ ಎನ್‌ಎಸ್‌ಎಪಿ, ಆರ್‌ಯುಸಿ–3 ಹೋಬಳಿ ಮಂಚೇನಹಳ್ಳಿ ಜಾತಿ ಮತ್ತು ಆದಾಯ ಪತ್ರಗಳು |
| 22 | ವಿ. ವೆಂಕಟೇಶ್, ದ್ವಿ.ದ.ಸ | ಜಿಲ್ಲಾಧಿಕಾರಿಗಳ ಆದೇಶದಂತೆ ಬಚ್ಚರೆಡ್ಡಿಹಳ್ಳಿ ಕಂ. ವೃತ್ತದ ಗ್ರಾಮಲೆಕ್ಕಿಗರ ಕಾರ್ಯ ನಿರ್ವಹಣೆ |
| 23 | ಕೆ. ಉಮಾದೇವಿ, ದ್ವಿ.ದ.ಸ. | ಆಹಾರ ಶಾಖೆಯಲ್ಲಿ ಕಾರ್ಯನಿರ್ವಹಣೆ |
| 24 | ಜಾಫರ್, ದ್ವಿ.ದ.ಸ. | ಭೂ ಮಾಪನ ಸಿಬ್ಬಂದಿ ಶಾಖೆ ನಿರ್ವಹಣೆ |
| 25 | ಎ.ಎಸ್. ಪ್ರಸಾದ್ ದ್ವಿ.ದ.ಸ | ಆರ್ ಯುಸಿ–2 ಹೋಬಳಿ ಎಡಿಎಂ ಅಂಕಿಅಂಶಗಳ ಶಾಖೆ ನಿರ್ವಹಣೆ ರಾಷ್ಟ್ರೀಯ ಹಬ್ಬಗಳು, ಆಶ್ರಯ |
| 26 | ಕೆ.ಜೆ. ನಾಗೇಶ್ ದ್ವಿ.ದ.ಸ. | ಆರ್‌ಆರ್‌ಟಿ ಕಸಬಾ, ಮಂಚೇನಹಳ್ಳಿ ಹೊಸೂರು, ಎನ್‌ಸಿಆರ್ ಬಾಂದುಕಲ್ಲೂ, ಮುಟೇಷನ್ ಕಾಪಿಗಳು |
| 27 | ಎ. ವಿಜಯ ಬೆರಳಚ್ಚುಗಾರರು | ಎಲ್ಲಾ ಶಾಖೆಗಳಿಗೆ ಸಂಬಂಧಿಸಿದ ಬೆರಳಚ್ಚು ಕೆಲಸ ನಿರ್ವಹಿಸುವುದು |
| 28 | ವೈ.ಎಸ್. ಜಯಚಂದ್ರ | ನಾಡಕಛೇರಿ ಡಿ. ಪಾಳ್ಯ |
| 29 | ಎನ್.ಸುಧಾ ಗ್ರಾ.ಲೆ | ಡಿವಿಎಸ್ ಡಿಸಿಬಿ–2 ಹೋಬಳಿ, ದೃಢೀಕರಣ ಪತ್ರಗಳು |
| 30 | ಬಿ.ಆರ್. ಸುನಂದಕುಮಾರಿ, ಗ್ರಾ.ಲೆ. | ಒಎಪಿ ಎಸ್‌ಎಸ್‌ವೈ, ಪಿಜಿಸಿ, ಲೋಕಾಯುಕ್ತ, ಮಾಹಿತಿಹಕ್ಕು ಶಾಖೆಗಳ ನಿರ್ವಹಣೆ |
| 31 | ಎಂ. ಶಶಿಕಲ ಗ್ರಾ.ಲೆ. | ತೊಂಡೇಭಾವಿ ಹೋಬಳಿಯ ಜಾತಿ ಮತ್ತು ಆದಾಯ ದೃಢೀಕರಣ ಪತ್ರಗಳು |
| 32 | ರವಿಕುಮಾರ್ ಹೆಚ್. ಗ್ರಾ.ಲೆ | ಪಹಣಿ ವಿತರಣೆ |
| 33 | ವೈ.ಎ. ಅಬ್ದುಲ್ ಖಾದರ್ ಗ್ರಾ.ಲೆ. | ಭೂಮಿ ಶಾಖೆಯಲ್ಲಿ ಗಣಕ ಕೆಲಸ ನಿರ್ವಹಿಸುವುದು |
| 34 | ಎಂ. ಜಯರಾಮ | –,,– |
| 35 | ಕೆ. ನರಸಿಂಹರೆಡ್ಡಿ | ಎಎಲ್ ಎನ್, ಎಂಎಸ್ ಆರ್ ಬಿಎಡಿಪಿ, ಸಿಎಎಲ್, ಎಎಫ್ ಆರ್.ಸಿಎಂ ಫಂಡ್ಸ್ ವಾಸಸ್ಥಳ ದೃಢೀಕರಣ ಪತ್ರ, ಕಸಬಾ ಜಾತಿ ಮತ್ತು ಆದಾಯ ಪತ್ರಗಳು |
| 36 | ಲಷ್ಕರಿನಾಯಕ್ ಗ್ರಾ.ಲೆ | ಅರ್ಜಿಗಳ ಸ್ವೀಕೃತಿ ಶಾಖೆ |
| ಭೂಮಾಪನ ಶಾಖೆ: | | |
| 1 | ಎಂ.ಎನ್. ಪುಟ್ಟರಾಜು, ದ್ವಿ.ದ.ಭೂ | ಪ್ರಭಾರ ಪರ್ಯಾವೀಕ್ಷಕರ ಕೆಲಸ ನಿರ್ವಹಣೆ |
| 2 | ಆರ್. ನಾಗಾಂಜನೇಯ, ತಾ ಸರ್ವೆಯರ್ | ತಹಶೀಲ್ದಾರ್ ವಹಿಸುವ ಕೆಲಸಗಳ ನಿರ್ವಹಣೆ ಸ್ಕೆಚ್ ತಯಾರಿಸುವುದು ತಹಶೀಲ್ದಾರ್ ರಾಜಸ್ವ ನಿರೀಕ್ಷಕರ ಜೊತೆ ಸ್ಥಳ ತನಿಖೆ ಕಾರ್ಯ ನಿರ್ವಹಿಸುವುದು |
| 3 | ಬಿ. ನಂದೀಶ್, ದ್ವಿ.ದ.ಭೂ | ಕಸಬಾ ಹೋಬಳಿ 11ಇ ನಕ್ಷೆ ಪರಿಶೀಲಿಸಿದ ಹಾಗೂ ಪೂರಾ ನಂಬರಿಗೆ ಸಂಬಂಧಿಸಿದಂತೆ 11ಇ ನಕ್ಷೆ ತಯಾರಿಸುವುದು ದುರಸ್ತಿ ಕಾರ್ಯನಿರ್ವಹಣೆ, ಆಕಾರಬಂದ್ ಹಾಗೂ ಫಾರಂ ನಂ. 10 ತಯಾರಿಸುವುದು. |
| 4 | ಬಿ.ವಿ. ಲೋಕೇಶ್ | ಮಂಚೇನಹಳ್ಳಿ ಹೋಬಳಿ ಸರ್ವೆಯರ್ –11ಇ ನಕ್ಷೆ ಪರಿಶೀಲನೆ, ಹಾಗೂ ಪೂರಾ ನಂಬರಿಗೆ 11ಇ ನಕ್ಷೆ ತಯಾರಿಸುವುದು–ದುರಸ್ತಿ ಕಾರ್ಯನಿರ್ವಹಣೆ, ಆಕಾರಬಂದ್ ಹಾಗೂ ಫಾರಂ ನಂ. 1 ತಯಾರಿಸುವುದು |

| | | |
|---|---|---|
| 5 | ಜಿ.ಡಿ. ವಸಂತಕುಮಾರ್ ದ್ವಿ.ದ.ಭೂ. | ತೊಂಡೇಬಾವಿ ಹೋಬಳಿ ಸರ್ವೆಯರ್ –ದರಖಾಸ್ತು ಅನ್ಯಕ್ರಾಂತ ಮುಟೇಷನ್, ಹದ್ದುಬಸ್ತು, ಕೆರೆ ದೇವಸ್ಥಾನ ಆಶ್ರಯ ಅಳತೆ ಮಾಡುವುದು ದುರಸ್ತಿ ಮಾಡುವುದು, ಭೂ ದಾಖಲೆಗಳ ಸ್ಕ್ಯಾನಿಂಗ್ ಗ್ರಾಮ ಪರಿಶೀಲಿಸುವುದು–ಗಣಕ ಆಕಾರಬಂದು ಪರಿಶೀಲನೆ. |
| 6 | ದೇವರಾಜ್ ದ್ವಿ.ದ.ಭೂ | ನಗರಗೆರೆ ಹೋಬಳಿ ಸರ್ವೆಯರ್–11ಇ ಪರಿಶೀಲನೆ ಮಾಡುವುದು ಪೂರಾ ನಂಬರಿಗೆ ಸಂಬಂಧಿಸಿದಂತೆ 11ಇ ನಕ್ಷೆ ತಯಾರಿಸುವುದು ಹೋಬಳಿಗೆ ಸಂಬಂಧಿಸಿದ ದುರಸ್ತಿ ಕಾರ್ಯನಿರ್ವಹಣೆ, ಆಕಾರ ಬಂದ್ ಹಾಗೂ ಫಾರಂ ನಂ. 10 ತಯಾರಿಸುವುದು. |
| 7 | ಎ. ಗುರುರಾಜ್ ದ್ವಿ.ದ.ಭೂ | ಪೋಡಿ ಶಾಖೆ ನಿರ್ವಹಣೆ, ಭೂ ದಾಖಲೆಗಳ ಸ್ಕ್ಯಾನಿಂಗ್ ಕೆಲಸ ನಿರ್ವಹಣೆ ಹಾಗೂ ಸಂಯೋಜಿತ ಮುಟೇಷನ್ ಪೋಡಿಗಳ ದುರಸ್ತಿ ಕೆಲಸ ನಿರ್ವಹಣೆ |
| 8 | ಡಿ. ಕಲ್ಲಯ್ಯ, | ಡಿ. ಪಾಳ್ಯ ಹೋಬಳಿ ಸರ್ವೆಯರ್–11ಇ ನಕ್ಷೆ ಪರಿಶೀಲನೆ ಮಾಡುವುದು–ಪೂರಾ ನಂಬರಿಗೆ ಸಂಬಂಧಿಸಿದಂತೆ 11ಇ ನಕ್ಷೆ ತಯಾರಿಸುವುದು–ಹೋಬಳಿಗೆ ಸಂಬಂಧಿಸಿದ ದುರಸ್ತಿ ಕಾರ್ಯನಿರ್ವಹಣೆ, ಆಕಾರಬಂದ್ ಹಾಗೂ ಫಾರಂ ನಂ. 10 ತಯಾರಿಸುವುದು. |
| 9 | ಡಿ.ಆರ್. ಅನಂತರಾಜು, ದ್ವಿ.ದ.ಭೂ | ಹೊಸೂರು ಹೋಬಳಿ ಸರ್ವೆಯರ್–11ಇ ನಕ್ಷೆ ಪರಿಶೀಲನೆ ಮಾಡುವುದು–ಪೂರಾ ನಂಬರಿಗೆ ಸಂಬಂಧಿಸಿದಂತೆ 11ಇ ನಕ್ಷೆ ತಯಾರಿಸುವುದು–ಹೋಬಳಿಗೆ ಸಂಬಂಧಿಸಿದ ದುರಸ್ತಿ ಕಾರ್ಯ ನಿರ್ವಹಣೆ, ಆಕಾರಬಂದ್ ಹಾಗೂ ಫಾರಂ ನಂ. 10 ತಯಾರಿಸುವುದು |
| 10 | ಕೆ.ಎಸ್. ಶಂಕರಪ್ಪ –,,– | |
| 11 | ಎಂ.ಎಸ್. ಅರವಿಂದರೆಡ್ಡಿ –,,– | 11ಇ ನಕ್ಷೆ ಪರಿಶೀಲನೆ– ಪೂರಾ ನಂಬರಿಗೆ ಸಂಬಂಧಿಸಿದಂತೆ 11ಇ ನಕ್ಷೆ ತಯಾರಿಸುವುದು–ಹೋಬಳಿಗೆ ಸಂಬಂಧಿಸಿದಂತೆ ದುರಸ್ತಿ ಕಾರ್ಯನಿರ್ವಹಣೆ, ಆಕಾರಬಂದ್ ಹಾಗೂ ಫಾರಂ ನಂ. 10 ತಯಾರಿಸುವುದು. |
| 12 | ಚಂದ್ರಶೇಖರಯ್ಯ –,,– | ಮೂಲ ದಾಖಲೆಗಳ ನಿರ್ವಹಣೆ 11ಇ ನಕ್ಷೆಗಳು, ಸಾರ್ವಜನಿಕರ ನಕಲುಗಳು |
| 13 | ವಿಜಯಲಕ್ಷ್ಮಿ ಸಾಂಖ್ಯಿಕ ನಿರೀಕ್ಷಕರು | ಎಲ್ಲಾ ಅಂಕಿಅಂಶಗಳ ತಯಾರಿಕೆ ವಿಲೇವಾರಿ, ತಯಾರಿಕೆ ಸಣ್ಣ ನೀರಾವರಿ ಗಣತಿ, ಎಲ್ಲಾ ಗಣತಿ ಕಾರ್ಯಗಳು |
| 14 | ಕೆ.ಆರ್. ಚಂದ್ರಯ್ಯ ಆಹಾರ ನಿರೀಕ್ಷಕರು | ನ್ಯಾಯಬೆಲೆ ಅಂಗಡಿಗಳ ತಪಾಸಣೆ, ಅನಿಲ ಹಾಗೂ ಪಡಿತರ ಚೀಟಿಗಳ ಬಗ್ಗೆ ಪರಿಶೀಲನೆ–ಪಡಿತರ ಚೀಟಿ ವಿತರಣೆ ಹಾಗೂ ಅನರ್ಹ ಪಡಿತರ ಚೀಟಿಗಳ ಪತ್ತೆ ಹಚ್ಚುವುದು |
| 15 | 57 ಜನ ಗ್ರಾಮಲೆಕ್ಕಿಗರ ಕೆಲಸ | ಆಯಾ ಕಂದಾಯ ವೃತ್ತಗಳಲ್ಲಿ ಸರ್ಕಾರಿ ಬಾಕಿ ವಸೂಲಿ ಜನನ ಮರಣ ನೋಂದಣಿ ನಿರ್ವಹಣೆ, ಗಣತಿ ಕಾರ್ಯ ಚುನಾವಣೆ ಕೆಲಸ, ಜಾತಿ ಮತ್ತು ಆದಾಯ ಪತ್ರಗಳು ವರದಿ ತಯಾರಿಕೆ ಪಡಿತರ ಚೀಟಿ ಸಮೀಕ್ಷೆ, ಹಕ್ಕುದಾಖಲೆ ಕಡತ ತಯಾರಿಕೆ ರಾಜಸ್ವ ನಿರೀಕ್ಷಕರು ಹಾಗೂ ತಹಶೀಲ್ದಾರ್ ನಿರ್ದೇಶನದಂತೆ ಕಡತ ತಯಾರಿಕೆ ಹಾಗೂ ಕಾರ್ಯನಿರ್ವಹಣೆ. |

ಪಿ.ಆರ್. 582

ತಹಶೀಲ್ದಾರ್,
ಗೌರಿಬಿದನೂರು, ತಾಲ್ಲೂಕು,

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ನಂ. ಎಲ್.ಎನ್.ಡಿ(ಎ) ಸಿಆರ್:174, 2007–08, ಬೆಂಗಳೂರು, ದಿನಾಂಕ:29ನೇ ಮೇ 2008**

**ವಿಷಯ:** ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಕಸಬಾ ಹೋಬಳಿ ತಮ್ಮನಾಯಕನಹಳ್ಳಿ ಗ್ರಾಮದ ಸರ್ವೆ ನಂ. 96ರಲ್ಲಿ 2–00 ಎಕರೆ ಜಮೀನನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರಿಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರದ ನಂ. ಆರ್.ಡಿ. 265 ಎಲ್.ಜಿ.ಬಿ. /07 (ಭಾಗ 6), ಬೆಂಗಳೂರು ದಿನಾಂಕ:18.10.2007
2. ತಹಶೀಲ್ದಾರ್, ಆನೇಕಲ್ ತಾಲ್ಲೂಕು ರವರ ಪತ್ರದ ಸಂ:ಎಲ್‌ಎನ್‌ಡಿಸಿಆರ್ 313/07–08
3. ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಬೆಂಗಳೂರು ಬೃಹತ್ ಕಾಮಗಾರಿ ಉತ್ತರ ವಿಭಾಗ, ಆನಂದರಾವ್ ವೃತ್ತ, ಬೆಂಗಳೂರು ಇವರ ಪತ್ರದ ಸಂಖ್ಯೆ:ಕಾನಿಇಂ (ವಿ) ಬೆಂಬೃಕಾಉವಿ/ಸಿವಿಲ್ 08–09/836–42 ದಿನಾಂಕ:23.5.2008.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ಒತ್ತುವರಿಯನ್ನು ಸರ್ವೆಮಾಡಿ ಪತ್ತೆಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್ ವರೆಗೂ ಖುಲ್ಲಾ ಪಡಿಸಲಾಗಿರುವ 3313–28 ಎಕರೆಗಳಲ್ಲಿ ವಿವಿಧ ಸರ್ಕಾರಿ/ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಅಗತ್ಯವಾಗಿರುವ ಹಿನ್ನೆಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ ಉಲ್ಲೇಖ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಕಸಬಾ ಹೋಬಳಿ ತಮ್ಮನಾಯಕನಹಳ್ಳಿ ಗ್ರಾಮದ ಸರ್ವೆ ನಂ. 96ರಲ್ಲಿ 2–00 ಎಕರೆ ಜಮೀನನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರಿಗೆ ಬೆಲೆ ನಿಗಧಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969 ರ ನಿಯಮ 20(1)(ಸಿ) ರನ್ವಯ ಮಂಜೂರಾತಿ ಮಾಡಲು ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕಗಳು ಸೇರಿ ಒಟ್ಟು ರೂ. 11,95, 535/– (ಹನ್ನೊಂದು ಲಕ್ಷದ ತೊಂಭತ್ತೈದು ಸಾವಿರದ ಐದು ನೂರ ಮೂವತ್ತೈದು ರೂಗಳು ಮಾತ್ರ) ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ದಿನಾಂಕ:16.11.2007 ರಂದು ತಿಳುವಳಿಕೆ ಪತ್ರ ನೀಡಲಾಗಿತ್ತು ಅದರಂತೆ ಉಲ್ಲೇಖ (3)ರನ್ವಯ ಮೇಲ್ಕಂಡ ಸಂಸ್ಥೆಯವರು ಚಲನ್ ದಿನಾಂಕ:22.5.2008 ರಂದು ಸರ್ಕಾರಕ್ಕೆ ಹಣ ಪಾವತಿಸಿರುವ ಮೂಲ ಚಲನ್‌ನ್ನು ಹಾಜರುಪಡಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಕಸಬಾ ಹೋಬಳಿ ತಮ್ಮನಾಯಕನಹಳ್ಳಿ ಗ್ರಾಮದ ಸರ್ವೆ ನಂ. 96ರಲ್ಲಿ 2–00 ಎಕರೆ ಜಮೀನನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1. ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.
2. ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ ಎರಡು ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.
3. ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.
4. ಸಂಸ್ಥೆಗೆ ಮಂಜೂರಾದ ಜಮೀನನ್ನು ಬೇರೆ ಯಾರಿಗೂ ಗುತ್ತಿಗೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ, ಆದರೆ ಈ ಜಮೀನಿನ ಮೇಲೆ ಯಾವುದೇ ಬ್ಯಾಂಕ್/ಸಹಕಾರ ಸಂಘಗಳಿಂದ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಬಹುದಾಗಿದ್ದು, ಸಾಲ ತಿರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟುಗೋಲು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.

5 ಈ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಬೇಕು ಹಾಗೂ ಇನ್ನಿತರ ಉದ್ದೇಶಗಳಿಗಾಗಿ ಈ ಜಮೀನನ್ನು ಬಳಸಬಾರದು.

6 ಮಂಜೂರಾತಿ ಸಂಸ್ಥೆಯು ನಿಗಧಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿ ಮಾಡಿಸಿಕೊಳ್ಳತಕ್ಕದ್ದು.

7 ಪ್ರಶ್ನಿತ ಜಮೀನಿನ ಬಗ್ಗೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

8 ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದಲ್ಲಿ ಸರ್ಕಾರಕ್ಕೆ ಹಿಂತೆಗೆದುಕೊಳ್ಳಲಾಗುವುದು ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.

9 ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತಿ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.

10 ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.

11 ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

12 ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 20(1)(ಸಿ) ರನ್ವಯ ನಿಗಧಿಪಡಿಸಿರುವ ನಮೂನೆಯಲ್ಲಿ ಕರಾರು ಪತ್ರವನ್ನು ಬರೆದುಕೊಡತಕ್ಕದ್ದು.

13 ಶಾಸನಬದ್ಧ ಕಾಯ್ದೆಗಳ ಕಟ್ಟುಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘಿಸಿದಲ್ಲಿ ಈ ಭೂ ಮಂಜೂರಾತಿಯು ತಾನೇ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ಪಿ.ಆರ್. 637

ವಿಶೇಷ ಜಿಲ್ಲಾಧಿಕಾರಿಗಳು
ಬೆಂಗಳೂರು ಜಿಲ್ಲೆ, ಬೆಂಗಳೂರು

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ಸಂಖ್ಯೆ:ಎಲ್ ಎನ್ ಡಿ [ಎನ್.ಎ] ಸಿಆರ್ 105/2007–08, ಬೆಂಗಳೂರು, ದಿನಾಂಕ:14ನೇ ಮೇ 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ ಸೊಣ್ಣೇನಹಳ್ಳಿ ಗ್ರಾಮದ ಸರ್ವೆ ನಂ:49ರಲ್ಲಿ 0–16 ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1 ಸರ್ಕಾರದ ಪತ್ರದ ಸಂಖ್ಯೆ:ಆರ್‌ಡಿ 1196 ಎಲ್‌ಜಿಬಿ 2007, ದಿನಾಂಕ:20.11.2007

2 ತಹಶೀಲ್ದಾರ್ ರವರ ವರದಿ ಸಂಖ್ಯೆ:ಎಲ್‌ಎನ್‌ಡಿ [ಎನ್.ಎ] ಸಿಆರ್ 110/2007–08, ದಿನಾಂಕ:21.6.2007.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಸೊಣ್ಣೇನಹಳ್ಳಿ ಗ್ರಾಮದ ಸರ್ವೆ ನಂ: 49ರಲ್ಲಿ 0–16 ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕಾಗಿ ಮಂಜೂರು ಮಾಡುವಂತೆ ತಹಶೀಲ್ದಾರ್‌ರವರು ಉಲ್ಲೇಖ [2] ರಲ್ಲಿ ಸಲ್ಲಿಸಿದ್ದ ವರದಿಯಂತೆ ಸೊಣ್ಣೇನಹಳ್ಳಿ ಗ್ರಾಮಕ್ಕೆ ಸ್ಮಶಾನದ ಅಗತ್ಯವಿರುವುದಾಗಿಯೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸತಕ್ಕ ಐಟಂಗಳು ಯಾವುದೂ ಇಲ್ಲವೆಂದು ಈ ಜಮೀನನ್ನು ಸ್ಮಶಾನಕ್ಕೆ ಮೀಸಲಿಡುವಲ್ಲಿ ಗ್ರಾಮಸ್ಥರ ತಂಟೆ ತಕರಾರು ಇಲ್ಲವೆಂದು ತಿಳಿಸಿ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿದ್ದರು.

ತಹಸೀಲ್ದಾರ್‌ರವರ ವರದಿಯಂತೆ ಮೇಲ್ಕಂಡ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಸೊಣ್ಣೇನಹಳ್ಳಿ ಗ್ರಾಮದ ಸರ್ವೆ ನಂ. 49ರಲ್ಲಿನ 0–16 ಗುಂಟೆ ಜಮೀನನ್ನು ಸೊಣ್ಣೇನಹಳ್ಳಿ ಗ್ರಾಮಸ್ಥರ ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1969ರ ಕಲಂ 71ರಡಿ ಕಾಯ್ದಿರಿಸುವ ಬಗ್ಗೆ ಈ ಕಛೇರಿಯಿಂದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಸರ್ಕಾರವು ಉಲ್ಲೇಖ [1] ರ ಆದೇಶದಲ್ಲಿ ಮೇಲ್ಕಂಡ ಸೊಣ್ಣೇನಹಳ್ಳಿ ಗ್ರಾಮದ

ಸರ್ವೆ ನಂ:49ರಲ್ಲಿನ 0–16 ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನದ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಸೊಣ್ಣೇನಹಳ್ಳಿ ಗ್ರಾಮದ ಸರ್ವೆನಂ:49ರಲ್ಲಿನ 0–16 ಗುಂಟೆ ಜಮೀನನ್ನು ಸ್ಮಶಾನದ ಉದ್ದೇಶಕ್ಕಾಗಿ ಗೋಮಾಳ ಶೀರ್ಷಿಕೆಯಿಂದ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 97[4] ರನ್ವಯ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಲಾಗಿದೆ ಮತ್ತು ಸ್ಮಶಾನದ ನಿರ್ವಹಣೆ/ಉಸ್ತುವಾರಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸಲು ಆದೇಶಿಸಿದೆ.

**ಷರತ್ತುಗಳು**

1. ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯತಿಗೆ ವರ್ಗಾಯಿಸತಕ್ಕದ್ದು.
2. ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.
3. ಗ್ರಾಮ ಪಂಚಾಯತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್ ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.
4. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದು ಪಡಿಸಲಾಗುವುದು.
5. ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ]ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

**ಜಿಲ್ಲಾಧಿಕಾರಿಗಳ ಕಾರ್ಯಾಲಯ ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ:ಎಲ್‌ಎನ್‌ಡಿ [ಎನ್.ಎ] ಸಿಆರ್ 106/2007–08, ಬೆಂಗಳೂರು, ದಿನಾಂಕ:14ನೇ ಮೇ 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಹೆಸರಘಟ್ಟ ಹೋಬಳಿ. ಕಾಕೋಳು ಗ್ರಾಮದ ಸರ್ವೆ ನಂ:77ರಲ್ಲಿ 2–06 ಎಕರೆ/ ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರದ ಸಂಖ್ಯೆ :ಆರ್‌ಡಿ 1195 ಎಲ್‌ಜಿಬಿ 2007, ದಿನಾಂಕ:20.11.2007.
2. ತಹಶೀಲ್ದಾರ್ ರವರ ವರದಿ ಸಂಖ್ಯೆ: ಎಲ್‌ಎನ್‌ಡಿ [ಎನ್.ಎ] ಸಿಆರ್ 104/2007–08, ದಿನಾಂಕ:21.6.2007.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಹೆಸರಘಟ್ಟ ಹೋಬಳಿ, ಕಾಕೋಳು ಗ್ರಾಮದ ಸರ್ವೆನಂ: 77ರಲ್ಲಿ 2–06 ಎಕರೆ/ ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕಾಗಿ ಮಂಜೂರು ಮಾಡುವಂತೆ ತಹಶೀಲ್ದಾರ್‌ರವರು ಉಲ್ಲೇಖ [2] ರಲ್ಲಿ ಸಲ್ಲಿಸಿದ್ದ ವರದಿಯಂತೆ ಕಾಕೋಳು ಗ್ರಾಮಕ್ಕೆ ಸ್ಮಶಾನದ ಅಗತ್ಯವಿರುವುದಾಗಿಯೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸತಕ್ಕ ಐಟಂಗಳು ಯಾವುದೂ ಇಲ್ಲವೆಂದು ಈ ಜಮೀನನ್ನು ಸ್ಮಶಾನಕ್ಕೆ ಮೀಸಲಿಡುವಲ್ಲಿ ಗ್ರಾಮಸ್ಥರ ತಂಟೆ ತಕರಾರು ಇಲ್ಲವೆಂದು ತಿಳಿಸಿ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿದ್ದರು.

ತಹಸೀಲ್ದಾರ್ ರವರ ವರದಿಯಂತೆ ಮೇಲ್ಕಂಡ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಕಾಕೋಳು ಗ್ರಾಮದ ಸರ್ವೆ ನಂ. 77ರಲ್ಲಿ 2–06 ಎಕರೆ/ಗುಂಟೆ ಜಮೀನನ್ನು ಕಾಕೋಳು ಗ್ರಾಮಸ್ಥರ ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1969ರ ಕಲಂ 71ರಡಿ ಕಾಯ್ದಿರಿಸುವ ಬಗ್ಗೆ ಈ ಕಛೇರಿಯಿಂದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಸರ್ಕಾರವು ಉಲ್ಲೇಖ [1] ರ ಆದೇಶದಲ್ಲಿ ಮೇಲ್ಕಂಡ ಕಾಕೋಳು ಗ್ರಾಮದ ಸರ್ವೆ ನಂ: 77ರಲ್ಲಿ 2–06 ಎಕರೆ/ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನದ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಕಾಕೋಳು ಗ್ರಾಮದ ಸರ್ವೆನಂ: 77ರಲ್ಲಿ 2–06 ಎಕರೆ/ಗುಂಟೆ ಜಮೀನನ್ನು ಸ್ಮಶಾನದ ಉದ್ದೇಶಕ್ಕಾಗಿ ಗೋಮಾಳ ಶೀರ್ಷಿಕೆಯಿಂದ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 97[4] ರನ್ವಯ ತಗ್ಗಿಸಿ ಕರ್ನಾಟಕ ಭೂ ಕಂದಾಯ

ಕಾಯ್ದೆ ಕಲಂ 71ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಲಾಗಿದೆ ಮತ್ತು ಸ್ಮಶಾನದ ನಿರ್ವಹಣೆ/ಉಸ್ತುವಾರಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸಲು ಆದೇಶಿಸಿದೆ.

**ಷರತ್ತುಗಳು**

1. ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯತಿಗೆ ವರ್ಗಾಯಿಸತಕ್ಕದ್ದು.

2. ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.

3. ಗ್ರಾಮ ಪಂಚಾಯತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗ್ಯೆರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್ ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.

4. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದು ಪಡಿಸಲಾಗುವುದು.

5. ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ]ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

**ಜಿಲ್ಲಾಧಿಕಾರಿಗಳ ಕಾರ್ಯಾಲಯ ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ:ಎಲ್ ಎನ್ ಡಿ [ಎನ್.ಎ] ಸಿಆರ್ 107/2007–08, ಬೆಂಗಳೂರು, ದಿನಾಂಕ:14ನೇ ಮೇ 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಹೆಸರಘಟ್ಟ ಹೋಬಳಿ. ಸೊಣ್ಣೇನಹಳ್ಳಿ ಗ್ರಾಮದ ಸರ್ವೆ ನಂ:116ರಲ್ಲಿ 0–22 ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರದ ಸಂಖ್ಯೆ :ಆರ್‌ಡಿ 1194 ಎಲ್‌ಜಿಬಿ 2007, ದಿನಾಂಕ:17.11.2007.
2. ತಹಶೀಲ್ದಾರ್ ರವರ ವರದಿ ಸಂಖ್ಯೆ: ಎಲ್‌ಎನ್‌ಡಿ [ಎನ್.ಎ] ಸಿಆರ್ 98/2007–08, ದಿನಾಂಕ:21.6.2007.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಹೆಸರಘಟ್ಟ ಹೋಬಳಿ, ಸೊಣ್ಣೇನಹಳ್ಳಿ ಗ್ರಾಮದ ಸರ್ವೆನಂ: 116ರಲ್ಲಿ 0–22 ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕಾಗಿ ಮಂಜೂರು ಮಾಡುವಂತೆ ತಹಶೀಲ್ದಾರ್‌ರವರು ಉಲ್ಲೇಖ [2] ರಲ್ಲಿ ಸಲ್ಲಿಸಿದ್ದ ವರದಿಯಂತೆ ಸೊಣ್ಣೇನಹಳ್ಳಿ ಗ್ರಾಮಕ್ಕೆ ಸ್ಮಶಾನದ ಅಗತ್ಯವಿರುವುದಾಗಿಯೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸತಕ್ಕ ಐಟಂಗಳು ಯಾವುದೂ ಇಲ್ಲವೆಂದು ಈ ಜಮೀನನ್ನು ಸ್ಮಶಾನಕ್ಕೆ ಮೀಸಲಿಡುವಲ್ಲಿ ಗ್ರಾಮಸ್ಥರ ತಂಟೆ ತಕರಾರು ಇಲ್ಲವೆಂದು ತಿಳಿಸಿ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿದ್ದರು.

ತಹಸೀಲ್ದಾರ್ ರವರ ವರದಿಯಂತೆ ಮೇಲ್ಕಂಡ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಸೊಣ್ಣೇನಹಳ್ಳಿ ಗ್ರಾಮದ ಸರ್ವೆನಂ: 116ರಲ್ಲಿ 0–22 ಗುಂಟೆ ಜಮೀನನ್ನು ಸೊಣ್ಣೇನಹಳ್ಳಿ ಗ್ರಾಮಸ್ಥರ ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1969ರ ಕಲಂ 71ರಡಿ ಕಾಯ್ದಿರಿಸುವ ಬಗ್ಗೆ ಈ ಕಛೇರಿಯಿಂದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಸರ್ಕಾರವು ಉಲ್ಲೇಖ [1] ರ ಆದೇಶದಲ್ಲಿ ಮೇಲ್ಕಂಡ ಸೊಣ್ಣೇನಹಳ್ಳಿ ಗ್ರಾಮದ ಸರ್ವೆ ನಂ: 116ರಲ್ಲಿನ 0–22 ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನದ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಸೊಣ್ಣೇನಹಳ್ಳಿ ಗ್ರಾಮದ ಸರ್ವೆನಂ: 116ರಲ್ಲಿ 0–22 ಗುಂಟೆ ಜಮೀನನ್ನು ಸ್ಮಶಾನದ ಉದ್ದೇಶಕ್ಕಾಗಿ ಗೋಮಾಳ ಶೀರ್ಷಿಕೆಯಿಂದ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 97[4] ರನ್ವಯ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಲಾಗಿದೆ ಮತ್ತು ಸ್ಮಶಾನದ ನಿರ್ವಹಣೆ/ಉಸ್ತುವಾರಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸಲು ಆದೇಶಿಸಿದೆ.

**ಷರತ್ತುಗಳು**

1. ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯತಿಗೆ ವರ್ಗಾಯಿಸತಕ್ಕದ್ದು.

2. ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.

3. ಗ್ರಾಮ ಪಂಚಾಯತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್ ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.

4. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದು ಪಡಿಸಲಾಗುವುದು.

5. ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ]ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

**ಜಿಲ್ಲಾಧಿಕಾರಿಗಳ ಕಾರ್ಯಾಲಯ ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ:ಎಲ್ ಎನ್ ಡಿ [ಎನ್.ಎ] ಸಿಆರ್ 108/2007–08, ಬೆಂಗಳೂರು, ದಿನಾಂಕ:14ನೇ ಮೇ 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಹೆಸರಘಟ್ಟ ಹೋಬಳಿ. ಲಿಂಗರಾಜಪುರ ಗ್ರಾಮದ ಸರ್ವೆ ನಂ:5ರಲ್ಲಿ 2–09 ಎಕರೆ/ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರದ ಸಂಖ್ಯೆ :ಆರ್‌ಡಿ 1197 ಎಲ್‌ಜಿಬಿ 2007, ದಿನಾಂಕ:16.11.2007.

2. ತಹಶೀಲ್ದಾರ್ ರವರ ವರದಿ ಸಂಖ್ಯೆ: ಎಲ್‌ಎನ್‌ಡಿ [ಎನ್.ಎ] ಸಿಆರ್ 111/2007–08, ದಿನಾಂಕ:21.6.2007.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಹೆಸರಘಟ್ಟ ಹೋಬಳಿ, ಲಿಂಗರಾಜಪುರ ಗ್ರಾಮದ ಸರ್ವೆನಂ: 5ರಲ್ಲಿ 2–09 ಎಕರೆ/ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕಾಗಿ ಮಂಜೂರು ಮಾಡುವಂತೆ ತಹಶೀಲ್ದಾರ್‌ರವರು ಉಲ್ಲೇಖ [2] ರಲ್ಲಿ ಸಲ್ಲಿಸಿದ್ದ ವರದಿಯಂತೆ ಲಿಂಗರಾಜಪುರ ಗ್ರಾಮಕ್ಕೆ ಸ್ಮಶಾನದ ಅಗತ್ಯವಿರುವುದಾಗಿಯೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸತಕ್ಕ ಐಟಂಗಳು ಯಾವುದೂ ಇಲ್ಲವೆಂದು ಈ ಜಮೀನನ್ನು ಸ್ಮಶಾನಕ್ಕೆ ಮೀಸಲಿಡುವಲ್ಲಿ ಗ್ರಾಮಸ್ಥರ ತಂಟೆ ತಕರಾರು ಇಲ್ಲವೆಂದು ತಿಳಿಸಿ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿದ್ದರು.

ತಹಸೀಲ್ದಾರ್ ರವರ ವರದಿಯಂತೆ ಮೇಲ್ಕಂಡ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಲಿಂಗರಾಜಪುರ ಗ್ರಾಮದ ಸರ್ವೆನಂ: 5ರಲ್ಲಿನ 2–09 ಎಕರೆ/ಗುಂಟೆ ಜಮೀನನ್ನು ಲಿಂಗರಾಜಪುರ ಗ್ರಾಮಸ್ಥರ ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1969ರ ಕಲಂ 71ರಡಿ ಕಾಯ್ದಿರಿಸುವ ಬಗ್ಗೆ ಈ ಕಛೇರಿಯಿಂದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಸರ್ಕಾರವು ಉಲ್ಲೇಖ [1] ರ ಆದೇಶದಲ್ಲಿ ಮೇಲ್ಕಂಡ ಲಿಂಗರಾಜಪುರ ಗ್ರಾಮದ ಸರ್ವೆ ನಂ: 5ರಲ್ಲಿ 2–09 ಎಕರೆ/ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನದ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಲಿಂಗರಾಜಪುರ ಗ್ರಾಮದ ಸರ್ವೆನಂ: 5ರಲ್ಲಿ 2–09 ಎಕರೆ/ಗುಂಟೆ ಜಮೀನನ್ನು ಸ್ಮಶಾನದ ಉದ್ದೇಶಕ್ಕಾಗಿ ಗೋಮಾಳ ಶೀರ್ಷಿಕೆಯಿಂದ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 97[4] ರನ್ವಯ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಲಾಗಿದೆ ಮತ್ತು ಸ್ಮಶಾನದ ನಿರ್ವಹಣೆ/ಉಸ್ತುವಾರಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸಲು ಆದೇಶಿಸಿದೆ.

**ಷರತ್ತುಗಳು**

1. ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯತಿಗೆ ವರ್ಗಾಯಿಸತಕ್ಕದ್ದು.

2. ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.

3. ಗ್ರಾಮ ಪಂಚಾಯತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್ ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.

4. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದು ಪಡಿಸಲಾಗುವುದು.

5. ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ]ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

**ಜಿಲ್ಲಾಧಿಕಾರಿಗಳ ಕಾರ್ಯಾಲಯ ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ:ಎಲ್ ಎನ್ ಡಿ [ಎನ್.ಎ] ಸಿಆರ್ 109/2007–08, ಬೆಂಗಳೂರು, ದಿನಾಂಕ:14ನೇ ಮೇ 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ. ಕೆಂಪನಹಳ್ಳಿ ಗ್ರಾಮದ ಸರ್ವೆ ನಂ:26ರಲ್ಲಿ 2–13 ಎಕರೆ/ ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರದ ಸಂಖ್ಯೆ :ಆರ್ ಡಿ 114 ಎಲ್‌ಜಿಬಿ 2008, ದಿನಾಂಕ:29.2.2008.

2. ತಹಶೀಲ್ದಾರ್ ರವರ ವರದಿ ಸಂಖ್ಯೆ: ಎಲ್‌ಎನ್‌ಡಿ [ಎನ್.ಎ] ಸಿಆರ್ 125/2007–08, ದಿನಾಂಕ:21.6.2007.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ. ಕೆಂಪನಹಳ್ಳಿ ಗ್ರಾಮದ ಸರ್ವೆ ನಂ:26ರಲ್ಲಿ 2–13 ಎಕರೆ/ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕಾಗಿ ಮಂಜೂರು ಮಾಡುವಂತೆ ತಹಶೀಲ್ದಾರ್‌ರವರು ಉಲ್ಲೇಖ [2] ರಲ್ಲಿ ಸಲ್ಲಿಸಿದ್ದ ವರದಿಯಂತೆ ಕೆಂಪನಹಳ್ಳಿ ಗ್ರಾಮಕ್ಕೆ ಸ್ಮಶಾನದ ಅಗತ್ಯವಿರುವುದಾಗಿಯೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸತಕ್ಕ ಐಟಂಗಳು ಯಾವುದೂ ಇಲ್ಲವೆಂದು ಈ ಜಮೀನನ್ನು ಸ್ಮಶಾನಕ್ಕೆ ಮೀಸಲಿಡುವಲ್ಲಿ ಗ್ರಾಮಸ್ಥರ ತಂಟೆ ತಕರಾರು ಇಲ್ಲವೆಂದು ತಿಳಿಸಿ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿದ್ದರು.

ತಹಸೀಲ್ದಾರ್ ರವರ ವರದಿಯಂತೆ ಮೇಲ್ಕಂಡ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಯಲಹಂಕ ಹೋಬಳಿ. ಕೆಂಪನಹಳ್ಳಿ ಗ್ರಾಮದ ಸರ್ವೆ ನಂ:26ರಲ್ಲಿ 2–13 ಎಕರೆ/ಗುಂಟೆ ಜಮೀನನ್ನು ಕೆಂಪನಹಳ್ಳಿ ಗ್ರಾಮಸ್ಥರ ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1969ರ ಕಲಂ 71ರಡಿ ಕಾಯ್ದಿರಿಸುವ ಬಗ್ಗೆ ಈ ಕಛೇರಿಯಿಂದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಸರ್ಕಾರವು ಉಲ್ಲೇಖ [1] ರ ಆದೇಶದಲ್ಲಿ ಮೇಲ್ಕಂಡ ಕೆಂಪನಹಳ್ಳಿ ಗ್ರಾಮದ ಸರ್ವೆ ನಂ: 26ರಲ್ಲಿ 2–13 ಎಕರೆ/ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನದ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಯಲಹಂಕ ಹೋಬಳಿ. ಕೆಂಪನಹಳ್ಳಿ ಗ್ರಾಮದ ಸರ್ವೆ ನಂ:26ರಲ್ಲಿ 2–13 ಎಕರೆ/ಗುಂಟೆ ಜಮೀನನ್ನು ಸ್ಮಶಾನದ ಉದ್ದೇಶಕ್ಕಾಗಿ ಗೋಮಾಳ ಶೀರ್ಷಿಕೆಯಿಂದ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 97[4] ರನ್ವಯ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಲಾಗಿದೆ ಮತ್ತು ಸ್ಮಶಾನದ ನಿರ್ವಹಣೆ/ಉಸ್ತುವಾರಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸಲು ಆದೇಶಿಸಿದೆ.

**ಷರತ್ತುಗಳು**

1. ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯತಿಗೆ ವರ್ಗಾಯಿಸತಕ್ಕದ್ದು.

2. ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.

3. ಗ್ರಾಮ ಪಂಚಾಯತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್ ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.

4. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದು ಪಡಿಸಲಾಗುವುದು.

5. ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ]ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ಪಿ.ಆರ್. 957

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

**ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್ ನಂ. 132/2007–08, ದಿನಾಂಕ:22–8–2008 ತರೀಕೆರೆ ಪೊಲೀಸ್ ಠಾಣಾ, ಮೊಕದ್ದಮೆ ನಂ. 143/2007, ದಿನಾಂಕ:24ನೇ ಆಗಸ್ಟ್ 2007**

**ಉಪಸ್ಥಿತರು :** ಕೆ.ಸಿ. ಹರಿದಾಸ್
ಅಧಿಕಾರಿಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

**ಪಿರ್ಯಾಧಿದಾರರು :**
ಆರಕ್ಷಕ ಉಪ ನಿರೀಕ್ಷಕರು
ತರೀಕೆರೆ ಪೊಲೀಸ್ ಠಾಣೆ,
ತರೀಕೆರೆ ತಾಲ್ಲೂಕು

**ಆಪಾದಿತರು:**
ಎ1: ಕೆ. ಅಂತೋಣಿ ಬಿನ್ ಎಸ್, ಕುಮಾರ್
ಲಿಂಗದಹಳ್ಳಿ ಹೋ:ತರೀಕೆರೆ ತಾಲ್ಲೂಕು

ಎ2: ಸೆಂಥಿಲ್ ಬಿನ್ ಗಣೇಶನ್
ಲಿಂಗದಹಳ್ಳಿ ಹೋ:ತರೀಕೆರೆ ತಾಲ್ಲೂಕು

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ: 24.8.2007 ರಂದು ಸಂಜೆ 4.30 ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು ತರೀಕೆರೆ ಪೊಲೀಸ್ ಠಾಣೆ ಇವರು ತಮ್ಮ ಸಿಬ್ಬಂದಿಯೊಂದಿಗೆ ಗಸ್ತು ನಿರ್ವಹಿಸುತ್ತಾ ಕೋಡಿಕ್ಯಾಂಪ್ ಕಡೆಯಿಂದ ತರೀಕೆರೆ ಟೌನ್ ಕಡೆಗೆ ಬರುತ್ತಿರುವಾಗ ಎನ್.ಹೆಚ್ 206 ರಸ್ತೆಯಲ್ಲಿ ಎ.ಪಿ.ಎಂ.ಸಿ ಯಾರ್ಡ್ ಮುಂಭಾಗದ ರಸ್ತೆಯಲ್ಲಿ ಇಬ್ಬರು ವ್ಯಕ್ತಿಗಳು ಒಂದು ಮೋಟಾರು ಬೈಕ್‌ನಲ್ಲಿ ಮಧ್ಯೆ ಎರಡು ಪ್ಲಾಸ್ಟಿಕ್ ಚೀಲಗಳನ್ನು ಇಟ್ಟುಕೊಂಡು ಬರುತ್ತಿರುವುದನ್ನು ಗಮನಿಸಿ ಅನುಮಾನದ ಮೇರೆಗೆ ತಡೆದು ನಿಲ್ಲಿಸಿ ಪರಿಶೀಲಿಸಲಾಗಿ ಎರಡು ಪ್ಲಾಸ್ಟಿಕ್ ಚೀಲಗಳಲ್ಲಿ ರಟ್ಟಿನ ಬಾಕ್ಸ್ ಒಳಗೆ ಮದ್ಯ ತುಂಬಿದ ಬಾಟಲಿಗಳಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿಗಳಾದ ಕೆ. ಅಂಥೋಣಿ ಬಿನ್ ಎಸ್. ಕುಮಾರ್ ಮತ್ತೊಬ್ಬ ಸೆಂದಿಲ್ ಬಿನ್ ಗಣೇಶನ್ ಇವರುಗಳು ರಹದಾರಿ ವಗೈರೆ ಹಾಜರುಪಡಿಸದೆ ಇದ್ದುದರಿಂದ ಅಕ್ರಮವಾದುದೆಂದು ಖಚಿತಪಡಿಸಿಕೊಂಡು ಸ್ಥಳಕ್ಕೆ ಪಂಚರನ್ನು ಬರಮಾಡಿಕೊಂಡು ಪಂಚರ ಸಮಕ್ಷಮ ದೊರೆತ ಎರಡು ಪ್ಲಾಸ್ಟಿಕ್ ಚೀಲಗಳನ್ನು ಪರಿಶೀಲಿಸಿ ನೋಡಲಾಗಿ 180 ಮಿಲಿಯ ಒಟ್ಟು 88 ಮದ್ಯದ ಬಾಟಲಿಗಳಿದ್ದು, ಮದ್ಯದೊಂದಿಗೆ ವಾಹನ ಸಂಖ್ಯೆ:ಕೆ.ಎ. 18–ಹೆಚ್:6424 ರ ಸುಜುಕಿ ಸಮುರಾಯ್ ಮೋಟಾರ್ ಸೈಕಲ್‌ನ್ನು ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿಗೊಳಿಸಿ ಠಾಣಾ ಮೊಕದ್ದಮೆ ಸಂಖ್ಯೆ:143/2007ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ಪ್ರ.ಮಾ.ವ ಯನ್ನು ನ್ಯಾಯಾಲಯಕ್ಕೂ ಹಾಗೂ ಮೇಲಾಧಿಕಾರಿಗಳಿಗೆ ಸಲ್ಲಿಸಿ, ವಶಪಡಿಸಿಕೊಂಡ ವಾಹನ ಮತ್ತು ರಾಸಾಯನಿಕ ವಿಶ್ಲೇಷಣೆಗೆ ಮಾದರಿ ತೆಗೆದು ಉಳಿದ ಮದ್ಯವನ್ನು ನಿಯಮಾನುಸಾರ ಮುಂದಿನ ವಿಲೇವಾರಿ ಕುರಿತು ಅಬಕಾರಿ ನಿರೀಕ್ಷಕರು ತರೀಕೆರೆ ವಲಯ ಇವರಿಗೆ ಹಸ್ತಾಂತರಿಸಿ ತನಿಖೆ ಮುಂದುವರೆಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)ರ ಅಡಿಯಲ್ಲಿ ಪ್ರಾರಂಭಿಸಿ, ಆಪಾದಿತರಿಗೆ/ವಾಹನದ ಮಾಲೀಕರಿಗೆ ಕಲಂ 43 (ಬಿ) ಅಡಿಯಲ್ಲಿ ನೋಟೀಸ್ ಜಾರಿ ಮಾಡಲು ಕ್ರಮ ಕೈಗೊಂಡು, ವಾಹನ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ಕೋರಿ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದು ಮುಟ್ಟುಗೋಲಿನ ನಡವಳಿಕೆಗಳನ್ನು ಮುಂದುವರಿಸಲಾಗಿತ್ತು.

ದಿನಾಂಕ:24.4.2008ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರು ನೀಡಿರುವ "ಬಿ" ವರದಿಯ ಪ್ರಕಾರ ಶ್ರೀ ಎಸ್ ಸುಚೀಂದ್ರ ಬಿನ್ ಶಂಕರೇಗೌಡ ಹಳೇಮೂಡಿಗೆರೆ, ಮೂಡಿಗೆರೆ ತಾಲ್ಲೂಕು ಇವರು ವಾಹನದ ಮಾಲೀಕರೆಂದು ತಿಳಿದುಬಂದಿರುತ್ತದೆ.

ವಾಹನದ ಮಾಲೀಕರಿಗೆ ಈ ಪ್ರಾಧಿಕಾರದಿಂದ ನೀಡಲಾದ ಕಲಂ 43 (ಬಿ) ನೋಟೀಸ್‌ಗೆ ಸಂಬಂಧಿಸಿದಂತೆ ಸದರಿಯವರು ದಿನಾಂಕ:17.6.2008ರಂದು ಈ ಪ್ರಾಧಿಕಾರಕ್ಕೆ ಮನವಿ ಸಲ್ಲಿಸಿ ಈ ಪ್ರಕರಣದಲ್ಲಿ ಜಪ್ತಾದ ವಾಹನವನ್ನು ದಿನಾಂಕ:20–8–2007ರಲ್ಲಿ ಎಸ್. ಕುಮಾರ್, ಬ್ಲ್ಯೂ ಮೌಂಟೆನ್ ಎಸ್ಟೇಟ್, ತರೀಕೆರೆ ತಾಲ್ಲೂಕು ಇವರಿಗೆ ಕ್ರಯಕ್ಕೆ ಮಾರಾಟ ಮಾಡಿರುವುದಾಗಿಯೂ ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯಾವುದೇ ರೀತಿಯ ಆಕ್ಷೇಪಣೆ

ಇರುವುದಿಲ್ಲವೆಂದು ತಿಳಿಸುತ್ತಾ ಡೆಲಿವರಿ ನೋಟ್ ಜೆರಾಕ್ಸ್ ಪ್ರತಿಯನ್ನು ಲಗತ್ತಿಸಿ ಪ್ರಕರಣದಿಂದ ವಿಮುಕ್ತಿ ಮಾಡಬೇಕೆಂದು ಕೋರಿರುತ್ತಾರೆ.

ಸದರಿ ಪ್ರಕರಣದಲ್ಲಿ ಆರೋಪಿಗಳಾದ ಕೆ. ಅಂತೋಣಿ ಬಿನ್ ಎಸ್. ಕುಮಾರ್ ಬ್ಲ್ಯೂ ಮೌಂಟೆನ್ ಎಸ್ಟೇಟ್ ಸಿದ್ದರಬೈಲು ಲಿಂಗದಹಳ್ಳಿ ಹೋಬಳಿ ತರೀಕೆರೆ ತಾಲ್ಲೂಕು ಮತ್ತು ಸೆಂಥಿಲ್ ಬಿನ್ ಗಣೇಶನ್ ಬ್ಲ್ಯೂ ಮೌಂಟೆನ್ ಎಸ್ಟೇಟ್ ಸಿದ್ದರಬೈಲು ಲಿಂಗದಹಳ್ಳಿ ಹೋಬಳಿ ತರೀಕೆರೆ ತಾಲ್ಲೂಕು ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43 (ಬಿ) ಅಡಿಯಲ್ಲಿ ನೋಂದಾಯಿತ ಅಂಚೆ ಮೂಲಕ ನೀಡಲಾದ ನೋಟೀಸ್ ಜಾರಿಯಾಗಿರುವ ಸ್ವೀಕೃತಿ ಪ್ರತಿಗಳು ಕ್ರಮವಾಗಿ ಈ ಪ್ರಾಧಿಕಾರಕ್ಕೆ ದಿನಾಂಕ:21.7.2008 ಮತ್ತು 22.7.2008 ರಂದು ಬಂದಿರುತ್ತದೆ.

ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಗೊಳಿಸಲಾಗಿರುತ್ತದೆ.

ಪ್ರಕರಣಕ್ಕೆ ಸಂಬಂಧಿಸಿದಂತೆ ಸ.ಅ.ನಿ ರವರ ವಾದವನ್ನು ಆಲಿಸಿದ್ದು, ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತಮ್ಮ ವಾದ ಮಂಡಿಸಿರುತ್ತಾರೆ.

ಮೊಕದ್ದಮೆಯು ದಾಖಲಾಗಿ 1 ವರ್ಷ ಕಳೆದಿದ್ದು ವಾಹನದ ಮಾಲೀಕರು ವಾಹನವನ್ನು ಈ ಕೃತ್ಯಕ್ಕೆ ಬಳಸಿಲ್ಲ ಎಂಬುದನ್ನು ಸಾಕ್ಷ್ಯಾಧಾರಗಳ ಮುಖಾಂತರ ಸಾಬೀತುಪಡಿಸದೇ ಇರುವುದರಿಂದ ಮತ್ತು ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರುಪಡಿಸಿರುವ ವಾಹನದ ಡೆಲಿವರಿ ನೋಟ್‌ನಿಂದ ಈ ಪ್ರಕರಣದಲ್ಲಿನ ಒಂದನೇ ಆರೋಪಿಯಾದ ಕೆ. ಅಂತೋಣಿ ಇವರು ಎಸ್. ಕುಮಾರ್ ಇವರ ಮಗನಾಗಿದ್ದು ಅವರ ಸೂಚನೆಯ ಮೇರೆಗೆ ಆರೋಪಿಯು ಕೃತ್ಯವನ್ನು ಎಸಗಿರುವ ಅಂಶವು ಸ.ಅ.ನಿ. ವಾದದಿಂದ ಮೇಲ್ನೋಟಕ್ಕೆ ಸಾಬೀತಾಗುವುದರಿಂದ ಅಲ್ಲದೇ ವಾಹನದ ಮಾಲೀಕರಿಗೆ ಸಾಕಷ್ಟು ಸಮಯಾವಕಾಶ ನೀಡಿದಾಗಲು ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಮೇಲೆ ಹಕ್ಕು ಸಾಧಿಸದೇ ಇರುವುದರಿಂದ ಅಲ್ಲದೆ ಜಪ್ತಾಗಿರುವ ವಾಹನವು ಇಲಾಖಾ ವಶದಲ್ಲಿಯೇ ಇದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಹಾಳಾಗಿ ಸರ್ಕಾರದ ರಾಜಸ್ವಕ್ಕೆ ದಕ್ಕೆ ಉಂಟಾಗುವ ಸಂಭವವಿರುವುದರಿಂದ ಹಾಗೂ ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡ ಆದೇಶ.

**"ಆದೇಶ"**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ಆದ ನಾನು ಆರಕ್ಷಕ ಉಪ ನಿರೀಕ್ಷಕರು ತರೀಕೆರೆ ಪೊಲೀಸ್ ಠಾಣೆ ಇವರ ಮೊಕದ್ದಮೆ ನಂ. 143/2007, ದಿನಾಂಕ:24.8.2007 ರಲ್ಲಿ ಜಪ್ತುಪಡಿಸಿದ ವಾಹನದ ಸಂಖ್ಯೆ:ಕೆ.ಎ. 18–ಹೆಚ್:6424 ಸುಜುಕಿ ಸಮುರಾಯ್ ಕಪ್ಪು ಬಣ್ಣದ ಮೋಟಾರ್ ಬೈಕ್‌ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ)_ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 22ನೇ ಆಗಸ್ಟ್ 2008 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಡೆಪ್ಯೂಟಿ
ಕಮೀಷನರ್ ಆಫ್ ಎಕ್ಸೈಸ್ ಚಿಕ್ಕಮಗಳೂರು
ಜಿಲ್ಲೆ, ಚಿಕ್ಕಮಗಳೂರು

**ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್ ನಂ. 164/2004–05, ದಿನಾಂಕ:22–8–2008**

**ಅ.ಇ/ಚಿ.ಉ.ವಿ/ಪ್ರ.ವ.ವ. ಸಂಖ್ಯೆ:27/2004–05, ದಿನಾಂಕ:12ನೇ ಮಾರ್ಚ್ 2005**

**ಉಪಸ್ಥಿತರು :** ಕೆ.ಸಿ. ಹರಿದಾಸ್
ಅಧಿಕಾರಿಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ , ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

| ಪಿರ್ಯಾಧಿದಾರರು : | ಆಪಾದಿತರು : |
|---|---|
| ಅಬಕಾರಿ ನಿರೀಕ್ಷಕರು | ಎ1: ಕೆ. ಎನ್ ಅಣ್ಣೇಗೌಡ ಬಿನ್ ನಂಜೇಗೌಡ |
| ಚಿಕ್ಕಮಗಳೂರು ಉಪವಿಭಾಗ | ಎ2: ರಾಮಚಂದ್ರ ಬಿನ್ ಅಣ್ಣೇಗೌಡ |

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ: 12.3.2005 ರಂದು ರಾತ್ರಿ ಸುಮಾರು 11.30ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು ಚಿಕ್ಕಮಗಳೂರು ಉಪವಿಭಾಗ ಚಿಕ್ಕಮಗಳೂರು ಇವರು ಸಿಬ್ಬಂದಿಯೊಂದಿಗೆ ನಗರದಲ್ಲಿ ಗಸ್ತು ಕಾರ್ಯ ಮಾಡುತ್ತಿದ್ದ ಸಮಯದಲ್ಲಿ ದೊರೆತ ಖಚಿತ ವರ್ತಮಾನದ ಮೇರೆಗೆ ಪಂಚಾಯ್ತಿದಾರರೊಂದಿಗೆ ಕಡೂರು ರಸ್ತೆಯ ಲಕ್ಯಾ ಕ್ರಾಸ್‌ನಲ್ಲಿ ರಸ್ತೆಕಾವಲು ನಿರ್ವಹಿಸುತ್ತಿದ್ದ ಸಮಯದಲ್ಲಿ ಚಿಕ್ಕಮಗಳೂರಿನಿಂದ ಕಡೂರು ಕಡೆಗೆ ಒಂದು ಬೈಕ್‌ನಲ್ಲಿ ಇಬ್ಬರು ವ್ಯಕ್ತಿಗಳು ಒಂದು ತುಂಬಿದ ಪ್ಲಾಸ್ಟಿಕ್ ಚೀಲವನ್ನು ಇಟ್ಟುಕೊಂಡು ಬರುತ್ತಿರುವುದನ್ನು ಗಮನಿಸಿ ಅನುಮಾನದ ಮೇರೆಗೆ ವಾಹನವನ್ನು ತಡೆದು ನಿಲ್ಲಿಸಿ ಪರಿಶೀಲಿಸಿದಾಗ ಪ್ಲಾಸ್ಟಿಕ್ ಚೀಲದಲ್ಲಿ 100 ಮಿಲಿಯ ಒಟ್ಟು 130 ಸಾರಾಯಿ ಸ್ಯಾಚೆಟ್‌ಗಳು ಇದ್ದು, ಈ ಬಗ್ಗೆ ವಾಹನ ಚಾಲನೆ ಮಾಡುತ್ತಿದ್ದ ವ್ಯಕ್ತಿ ಕೆ.ಎನ್. ಅಣ್ಣೇಗೌಡ ಬಿನ್ ನಂಜೇಗೌಡ, ಹೌಸಿಂಗ್ ಬೋರ್ಡ್ ವಾಸ, ಚಿಕ್ಕಮಗಳೂರು ನಗರ ಮತ್ತು ಹಿಂಬದಿಯ ಸವಾರ ರಾಮಚಂದ್ರ ಬಿನ್ ಅಣ್ಣೇಗೌಡ, ಹೌಸಿಂಗ್ ಬೋರ್ಡ್ ವಾಸ, ಚಿಕ್ಕಮಗಳೂರು ನಗರ ಇವರುಗಳು ಯಾವುದೇ ಅಧಿಕೃತ ರಹದಾರಿಪತ್ರ ಇತ್ಯಾದಿ ದಾಖಲಾತಿಗಳನ್ನು ಹಾಜರುಪಡಿಸದೆ ಇದ್ದುದರಿಂದ ಸಾಗಾಣಿಕೆಯಾಗುತ್ತಿರುವ ಸಾರಾಯಿ ಅಕ್ರಮವಾದುದೆಂದು ದೃಢಪಡಿಸಿಕೊಂಡು ಮಹಜರ್ ಅಡಿಯಲ್ಲಿ ದೊರೆತ ಸಾರಾಯಿಯನ್ನು ಮತ್ತು ಆರೋಪಿಗಳ ಅಂಗ ಶೋಧನೆ ಸಮಯದಲ್ಲಿ ಎ:1 ಆರೋಪಿ ಬಳಿ ಸಾರಾಯಿ ಮಾರಾಟದಿಂದ ಸಂಗ್ರಹವಾಗಿದ್ದೆಂದು ತಿಳಿದು ಬಂದ ರೂ. 4,025 (ನಾಲ್ಕು ಸಾವಿರದ ಇಪ್ಪತ್ತೈದು ರೂಪಾಯಿಗಳು ಮಾತ್ರ) ಅನ್ನು ವಾಹನದ ಸಂಖ್ಯೆ ಕೆ18–ಎಲ್ 1851 ಬಜಾಜ್ ಸಿ.ಟಿ. 100 ಬೈಕ್‌ನೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿಗೊಳಿಸಿ ಕಛೇರಿಗೆ ತೆರಳಿ ಆರೋಪಿಗಳ ವಿರುದ್ಧ ಪ್ರ.ವ.ವ. ನಂ. 27/2004–05 ರ ಪ್ರಕಾರ ಪ್ರಕರಣ ದಾಖಲಿಸಿ ಪ್ರ.ವ.ವ. ಯನ್ನು ಘನ ನ್ಯಾಯಾಲಯಕ್ಕೂ ಹಾಗೂ ಪ್ರಾಧಿಕಾರಕ್ಕೂ ಸಲ್ಲಿಸಿ ಮುಂದಿನ ತನಿಖೆಗಾಗಿ ವಶಪಡಿಸಿಕೊಂಡ ವಸ್ತುಗಳನ್ನು ವಾಹನದೊಂದಿಗೆ ಅಬಕಾರಿ ಸಬ್ ಇನ್ಸ್‌ಪೆಕ್ಟರ್ ಜಾರಿ ಮತ್ತು ತನಿಖೆ ಚಿಕ್ಕಮಗಳೂರು ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಸಾರಾಯಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)ರ ಅಡಿಯಲ್ಲಿ ಪ್ರಾರಂಭಿಸಿ, ಆಪಾದಿತರಿಗೆ/ವಾಹನದ ಮಾಲೀಕರಿಗೆ ಕಲಂ 43 (ಬಿ) ಅಡಿಯಲ್ಲಿ ನೋಟೀಸ್ ಜಾರಿ ಮಾಡಲು ಕ್ರಮ ಕೈಗೊಂಡು, ವಾಹನ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ಕೋರಿ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದು ಮುಟ್ಟುಗೋಲಿನ ನಡವಳಿಕೆಗಳನ್ನು ಮುಂದುವರಿಸಲಾಗಿತ್ತು.

ದಿನಾಂಕ:21.3.2005ರಂದು ವಾಹನದ ಮಾಲೀಕರೆಂದು ಹೇಳಲಾದ ಶ್ರೀ ಅಣ್ಣೇಗೌಡ ಬಿನ್ ನಂಜೇಗೌಡ ತಡಗಸೆ, ಚಿಕ್ಕಮಗಳೂರು ಇವರು ತಮ್ಮ ನ್ಯಾಯವಾದಿಗಳ ಮುಖಾಂತರ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ ವಾಹನವನ್ನು ತಾತ್ಕಾಲಿಕ ಸುಪರ್ಧಿಗೆ ಬಿಡುಗಡೆಗೊಳಿಸಿ ಕೊಡಬೇಕಾಗಿ ಕೋರಿ, ಈ ಸಂಬಂಧ ಪ್ರಾಧಿಕಾರವು ವಿಧಿಸುವ ಷರತ್ತುಗಳನ್ನು ಪಾಲಿಸಲು ಬದ್ಧರಿರುವುದಾಗಿ ತಿಳಿಸಿರುತ್ತಾರೆ. ಅರ್ಜಿದಾರರ ಅರ್ಜಿಗೆ ಸಂಬಂಧಿಸಿದಂತೆ ತಮ್ಮ ಅಭಿಪ್ರಾಯ ನೀಡಲು ಸಹಾಯಕ ಅಭಿಯೋಜಕ ನಿರ್ದೇಶಕರಿಗೆ ಕೋರಿ ವರದಿ ಪಡೆಯಲಾಗಿತ್ತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಚಿಕ್ಕಮಗಳೂರು ಜಿಲ್ಲೆ ಇವರು ದಿನಾಂಕ:15.4.2005 ರಂದು ನೀಡಿರುವ "ಬಿ" ವರದಿಯ ಪ್ರಕಾರ ಶ್ರೀ ಅಣ್ಣೇಗೌಡ ಬಿನ್ ನಂಜೇಗೌಡ ತಡಗಸೆ ಚಿಕ್ಕಮಗಳೂರು ಇವರು ವಾಹನದ ಮಾಲೀಕರೆಂದು ತಿಳಿದುಬಂದಿರುತ್ತದೆ. ಹಾಗೂ ಮೋಟಾರು ವಾಹನ ನಿರೀಕ್ಷಕರು, ಪ್ರಾದೇಶಿಕ ಸಾರಿಗೆ ಕಛೇರಿ, ಚಿಕ್ಕಮಗಳೂರು ಇವರು ವಾಹನಕ್ಕೆ ರೂ. 15,600/ (ಹದಿನೈದು ಸಾವಿರದ ಆರು ನೂರು ರೂಪಾಯಿಗಳು ಮಾತ್ರ)ಗಳ ಮೌಲ್ಯ ನಿಗದಿಪಡಿಸಿರುತ್ತಾರೆ.

ಪ್ರಕರಣದಲ್ಲಿ ವಶಪಡಿಸಿಕೊಂಡ ಸಾರಾಯಿಯನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಗೊಳಿಸಿದ್ದು. ನಗದು ಹಣ 4,025/– (ನಾಲ್ಕು ಸಾವಿರದ ಇಪ್ಪತ್ತೈದು ರೂಪಾಯಿಗಳು ಮಾತ್ರ)ಗಳನ್ನು ಈ ಪ್ರಾಧಿಕಾರದ ಸ್ಥಿರೀಕರಣ ಷರತ್ತಿಗೊಳಪಟ್ಟು ಸರ್ಕಾರಕ್ಕೆ ಜಮಾ ಮಾಡಲಾಗಿರುತ್ತದೆ.

ಅರ್ಜಿದಾರರು ಸಲ್ಲಿಸಿದ ಅರ್ಜಿಯ ಪರಿಶೀಲನೆ ಬಗ್ಗೆ ಹಾಗೂ ಕಲಂ 43 (ಬಿ) ಪ್ರಕಾರ ನೀಡಲಾದ ನೋಟೀಸ್‌ಗೆ ಸಮಜಾಯಿಷಿ ನೀಡಲು ಅರ್ಜಿದಾರರಿಗೆ ಸಾಕಷ್ಟು ಕಾಲಾವಕಾಶ ನೀಡಿದಾಗಲು ಪ್ರಾಧಿಕಾರದ ಮುಂದೆ ಹಾಜರಾಗದೆ ಇದ್ದುದರಿಂದ ಪ್ರಕರಣವನ್ನು ವಿಚಾರಣೆಗೆ ತೆಗೆದುಕೊಂಡು ಸಾಕ್ಷಿದಾರರಿಗೆ ಸಮನ್ಸ್ ನೀಡಲಾಯಿತು. ಈ ಮದ್ಯ ಅರ್ಜಿದಾರರ

ಪರ ವಕೀಲರು ದಿನಾಂಕ:4.5.2006 ರಂದು ಪ್ರಾಧಿಕಾರಕ್ಕೆ ನಿವೃತ್ತಿ ಮೆಮೋ ಸಲ್ಲಿಸಿ ಪ್ರಕರಣದಿಂದ ನಿವೃತ್ತಿ ಹೊಂದಲು ಅನುಮತಿ ಕೋರಿದ್ದರಿಂದ, ಅನುಮತಿಸಿದ ಅರ್ಜಿದಾರರಿಗೆ ಪ್ರಕರಣದಲ್ಲಿ ಏಕಪಕ್ಷೀಯ ನಿರ್ಣಯ ಕೈಗೊಂಡು ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ನೋಟೀಸ್‌ನ್ನು ದಿನಾಂಕ:14.6.2006 ರಂದು ತನಿಖಾಧಿಕಾರಿಗಳ ಮುಖಾಂತರ ಜಾರಿಗೊಳಿಸಲಾಗಿತ್ತು. ಈ ಬಗ್ಗೆ ಅರ್ಜಿದಾರರು ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಸಮಜಾಯಿಷಿ ಸಲ್ಲಿಸಿರುವುದಿಲ್ಲ.

ಪ್ರಕರಣಕ್ಕೆ ಸಂಬಂಧಿಸಿದಂತೆ ಸ.ಅ.ನಿ ರವರ ವಾದವನ್ನು ಆಲಿಸಿದ್ದು, ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತಮ್ಮ ವಾದ ಮಂಡಿಸಿರುತ್ತಾರೆ.

ಮೊಕದ್ದಮೆಯು ದಾಖಲಾಗಿ 3 ವರ್ಷ 5 ತಿಂಗಳುಗಳು ಕಳೆದಿದ್ದು ವಾಹನದ ಮಾಲೀಕರು ವಾಹನವನ್ನು ಈ ಕೃತ್ಯಕ್ಕೆ ಬಳಸಿಲ್ಲ ಎಂಬುದನ್ನು ಸಾಕ್ಷ್ಯಾಧಾರಗಳ ಮುಖಾಂತರ ಸಾಬೀತುಪಡಿಸದೇ ಇರುವುದರಿಂದ ಮತ್ತು ವಾಹನದ ಮಾಲೀಕರೇ ಒಂದನೇ ಆರೋಪಿಯಾಗಿರುವುದರಿಂದ ಈ ಕೃತ್ಯದಲ್ಲಿ ನೇರವಾಗಿ ಭಾಗಿಯಾಗಿ ಕೃತ್ಯವನ್ನು ಎಸಗಿರುವ ಅಂಶವು ಸ.ಅ.ನಿ. ವಾದದಿಂದ ದೃಢಪಟ್ಟಿರುವುದರಿಂದ ಅಲ್ಲದೇ ವಾಹನದ ಮಾಲೀಕರಿಗೆ ಸಾಕಷ್ಟು ಸಮಯಾವಕಾಶ ನೀಡಿದಾಗಲು ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಮೇಲೆ ಹಕ್ಕು ಸಾಧಿಸದೇ ಇರುವುದರಿಂದ ಅಲ್ಲದೆ ಜಪ್ತಾಗಿರುವ ವಾಹನವು ಇಲಾಖಾ ವಶದಲ್ಲಿಯೇ ಇದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಹಾಳಾಗಿ ಸರ್ಕಾರದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಹಾಗೂ ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡ ಆದೇಶ.

**"ಆದೇಶ"**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ಆದ ನಾನು ಅಬಕಾರಿ ನಿರೀಕ್ಷಕರು ಚಿಕ್ಕಮಗಳೂರು ಉಪ ವಿಭಾಗ ಇವರ ಪ್ರ.ವ.ವ. ಸಂ:27/2004–05 ರ ಅಡಿಯಲ್ಲಿ ಜಪ್ತುಪಡಿಸಿದ ವಾಹನದ ಸಂಖ್ಯೆ:ಕೆ.ಎ. 18–ಎಲ್:1851 ಬಜಾಜ್ ಸಿ.ಟಿ. 100 ಬೈಕ್‌ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ)ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ)ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ನಗದು ಹಣ 4,025/–(ನಾಲ್ಕು ಸಾವಿರದ ಇಪ್ಪತ್ತೈದು ರೂಪಾಯಿಗಳು ಮಾತ್ರ) ಗಳನ್ನು ಸರ್ಕಾರಕ್ಕೆ ಸಂದಾಯ ಮಾಡಿದ ಕ್ರಮವನ್ನು ಅನುಸಮರ್ಥಿಸಿದೆ.

ಈ ಆದೇಶವನ್ನು ಇಂದು ಅಂದರೆ 22ನೇ ಆಗಸ್ಟ್ 2008 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಡೆಪ್ಯೂಟಿ
ಕಮೀಷನರ್ ಆಫ್ ಎಕ್ಸೈಸ್ ಚಿಕ್ಕಮಗಳೂರು
ಜಿಲ್ಲೆ, ಚಿಕ್ಕಮಗಳೂರು

**ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್ ನಂ. 130/2007–08, ದಿನಾಂಕ:29–8–2008**

**ಲಿಂಗದಹಳ್ಳಿ ಪೊಲೀಸ್ ಠಾಣಾ, ಮೊಕದ್ದಮೆ ನಂ. 79/2007, ದಿನಾಂಕ:19ನೇ ನವೆಂಬರ್ 2007**

**ಉಪಸ್ಥಿತರು :** ಕೆ.ಸಿ. ಹರಿದಾಸ್
ಅಧಿಕಾರಿಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

**ಪಿರ್ಯಾಧಿದಾರರು :** ಆರಕ್ಷಕ ಉಪ ನಿರೀಕ್ಷಕರು
ಲಿಂಗದ ಹಳ್ಳಿ ಪೊಲೀಸ್ ಠಾಣೆ

**ಆಪಾದಿತರು :** ಎ1: ಚಿನ್ನಪ್ಪಯ್ಯ ಬಿನ್ ಮುನಿಸ್ವಾಮಿ
ಎ2: ದಾಸಪ್ಪ ಬಿನ್ ಲೇಟ್ ಹನುಮಬೋವಿ

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ: 19.11.2007 ರಂದು ಸಂಜೆ 4.55 ಗಂಟೆಯ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು ಲಿಂಗದಹಳ್ಳಿ ಪೊಲೀಸ್ ಠಾಣೆ ಇವರು ಖಚಿತ ವರ್ತಮಾನದ ಮೇರೆಗೆ ಪಂಚಾಯ್ತಿದಾರರು ಮತ್ತು ಸಿಬ್ಬಂದಿಯೊಂದಿಗೆ ಲಿಂಗದಹಳ್ಳಿ ಗ್ರಾಮದ ಹುಲಿತಿಮ್ಮಾಪುರ ಗೇಟ್‌ನ ಹತ್ತಿರ ನಿಂತಿದ್ದಾಗ ತರೀಕೆರೆ ಕಡೆಯಿಂದ ಇಬ್ಬರು ಅಸಾಮಿಗಳು ವಾಹನ ಸಂಖ್ಯೆ:ಕೆಎ 18–ಇ 7577 ರ ಎಂ. 80 ಮೋಟಾರು ಸೈಕಲ್‌ನಲ್ಲಿ ಒಂದು ಪ್ಲಾಸ್ಟಿಕ್ ಚೀಲವನ್ನು ಇಟ್ಟುಕೊಂಡು ಬರುವುದನ್ನು ಗಮನಿಸಿ ವಾಹನವನ್ನು ತಡೆದು ನಿಲ್ಲಿಸಿ ವಾಹನದಲ್ಲಿದ್ದ ಅಸಾಮಿಗಳಾದ ಚಿನ್ನಪ್ಪಯ್ಯ ಬಿನ್ ಮುನಿಸ್ವಾಮಿ, ಹುಲಿತಿಮ್ಮಾಪುರ ಹಾಗೂ ದಾಸಪ್ಪ ಬಿನ್ ಲೇ. ಹನುಮಬೋವಿ ಹುಲಿತಿಮ್ಮಾಪುರ ಇವರುಗಳನ್ನು ವಿಚಾರಿಸಿ, ಪ್ಲಾಸ್ಟಿಕ್ ಚೀಲವನ್ನು ಪರಿಶೀಲಿಸಲಾಗಿ 180 ಮಿಲಿಯ 48 ಬಾಟಲಿಗಳಲ್ಲಿ ಒಟ್ಟು 8.640 ಲೀಟರ್ ವಿಂಡ್ಸರ್ ವಿಸ್ಕಿ ಮದ್ಯ ಹೊಂದಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ರಹದಾರಿ ವಗೈರೆ ಇತ್ಯಾದಿ ದಾಖಲಾತಿಗಳನ್ನು ಹಾಜರುಪಡಿಸದೆ ಇದ್ದುದರಿಂದ ಇದು ಅಕ್ರಮ ಮದ್ಯವೆಂದು ಖಚಿತಪಡಿಸಿಕೊಂಡು ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮವನ್ನು ಜರುಗಿಸಿ ದೊರೆತ ಮದ್ಯದೊಂದಿಗೆ ವಾಹನವನ್ನು ಅಮಾನತ್ತುಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿಗೊಳಿಸಿ ಠಾಣಾ ಮೊಕದ್ದಮೆ ನಂ. 79/2007 ರಲ್ಲಿ ಮೊಕದ್ದಮೆ ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ನ್ಯಾಯಾಲಯಕ್ಕೂ ಹಾಗೂ ಮೇಲಾಧಿಕಾರಿಗಳಿಗೂ ಸಲ್ಲಿಸಿ, ತನಿಖೆಯನ್ನು ಮುಂದುವರೆಸಿ ವಶಪಡಿಸಿಕೊಂಡ ವಾಹನ ಹಾಗೂ ಮದ್ಯವನ್ನು ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ ತರೀಕೆರೆ ತಾಲ್ಲೂಕು ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)ರ ಅಡಿಯಲ್ಲಿ ಪ್ರಾರಂಭಿಸಿ, ಆಪಾದಿತರಿಗೆ/ವಾಹನದ ಮಾಲೀಕರಿಗೆ ಕಲಂ 43 (ಬಿ) ಅಡಿಯಲ್ಲಿ ನೋಟೀಸ್ ಜಾರಿ ಮಾಡಲು ಕ್ರಮ ಕೈಗೊಂಡು, ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದು ಮುಟ್ಟುಗೋಲಿನ ನಡವಳಿಕೆಗಳನ್ನು ಮುಂದುವರಿಸಲಾಗಿತ್ತು.

ಆರೋಪಿಗಳ ಪೈಕಿ ದಾಸಪ್ಪ ಎಂಬುವವರಿಗೆ ನೋಟಿಸ್ ಜಾರಿಯಾಗಿದ್ದು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಚಿಕ್ಕಮಗಳೂರು ಜಿಲ್ಲೆ ಇವರು ನೀಡಿರುವ "ಬಿ" ವರದಿಯ ಪ್ರಕಾರ ಶ್ರೀ ನದೀಮ್ ಮೊಹಿದ್ದೀನ್ ಬಿನ್ ಮಖ್‌ದುಮ್ ಮೊಹಿದ್ದೀನ್ ನಂ. 762 ಮಾರುತಿ ಎಕ್ಸ್‌ಟೆನ್‌ಷನ್, ತರೀಕೆರೆ ಇವರು ವಾಹನದ ಮಾಲೀಕರೆಂದು ತಿಳಿದುಬಂದಿದ್ದು, ಈ ಮೇರೆಗೆ ವಾಹನದ ಮಾಲೀಕರಿಗೆ ದಿನಾಂಕ:27.5.2008 ಮತ್ತು 7.7.2008ರಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43 (ಬಿ) ಪ್ರಕಾರ ನೋಟೀಸ್‌ನ್ನು ನೊಂದಾಯಿತ ಅಂಚೆ ಹಾಗೂ ತನಿಖಾಧಿಕಾರಿ ಮೂಲಕ ಜಾರಿಗೊಳಿಸಲು ಕ್ರಮ ಕೈಗೊಂಡಿದ್ದು ನೋಟೀಸ್ ಜಾರಿಯಾದ ಬಗ್ಗೆ ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ದಿನಾಂಕ:17.7.2008 ರಂದು ವಾಹನದ ಮಾಲೀಕರೆಂದು ಹೇಳಲಾದ ಶ್ರೀ ನದೀಮ್ ಮೊಹಿದ್ದೀನ್ ಬಿನ್ ಮಖ್‌ದುಮ್ ಮೊಹಿದ್ದೀನ್ ಇವರು ಈ ಪ್ರಾಧಿಕಾರಕ್ಕೆ ನೋಂದಾಯಿತ ಅಂಚೆ ಮೂಲಕ ಮನವಿ ಸಲ್ಲಿಸಿ ಸದರಿ ವಾಹನಕ್ಕೆ ಸರ್ಕಾರವು ವಿಧಿಸುವ ದಂಡವನ್ನು ಹಾಗೂ ವಾಹನದ ಬೆಲೆಯನ್ನು ಕಟ್ಟಿಕೊಡಲು ಸಾಧ್ಯವಾಗದೇ ಇರುವುದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತಮ್ಮ ಅಭ್ಯಂತರ ಇಲ್ಲವೆಂದು ತಿಳಿಸಿರುತ್ತಾರೆ.

ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯದ ಪೈಕಿ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 8.460 ಲೀಟರ್ ಮದ್ಯವನ್ನು ಅಬಕಾರಿ ಅಧೀಕ್ಷಕರು, ಜಿಲ್ಲಾ ವಿಚಕ್ಷಣ ದಳ, ಚಿಕ್ಕಮಗಳೂರು ಜಿಲ್ಲೆ ಇವರ ಆದೇಶ ಸಂಖ್ಯೆ:ಡಿಇಐಬಿ/ ಸಿಆರ್ ಎಂ/ಮುಟ್ಟುಗೋಲು /17/2007–08, ದಿನಾಂಕ:8.2.2008ರಲ್ಲಿ ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿಗೊಳಿಸಲಾಗಿರುತ್ತದೆ.

ಪ್ರಕರಣಕ್ಕೆ ಸಂಬಂಧಿಸಿದಂತೆ ಸ.ಅ.ನಿ ರವರ ವಾದವನ್ನು ಆಲಿಸಿದ್ದು, ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತಮ್ಮ ವಾದ ಮಂಡಿಸಿರುತ್ತಾರೆ.

ಮೊಕದ್ದಮೆಯು ದಾಖಲಾಗಿ 9 ತಿಂಗಳುಗಳು ಕಳೆದಿದ್ದು ವಾಹನದ ಮಾಲೀಕರು ವಾಹನವನ್ನು ಈ ಕೃತ್ಯಕ್ಕೆ ಬಳಸಿಲ್ಲ ಎಂಬುದನ್ನು ಸಾಕ್ಷ್ಯಾಧಾರಗಳ ಮುಖಾಂತರ ಸಾಬೀತುಪಡಿಸದೇ ಇರುವುದರಿಂದ ಮತ್ತು ವಾಹನದ ಮಾಲೀಕರು ಅರ್ಜಿ ಸಲ್ಲಿಸಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ತಮ್ಮ ಅಭ್ಯಂತರವಿರುವುದಿಲ್ಲವೆಂದು ತಿಳಿಸಿರುವ ಅಂಶದಿಂದ

ವಾಹನದ ಮಾಲೀಕರಿಗೆ ಗೊತ್ತಿದ್ದೆ ಈ ಕೃತ್ಯವನ್ನು ಎಸಗಿರುವ ಅಂಶವು ಸಹಾಯಕ ಅಭಿಯೋಗ ನಿರ್ದೇಶಕರವರ ವಾದದಿಂದ ಮೇಲ್ನೋಟಕ್ಕೆ ಸಾಬೀತಾಗುವುದರಿಂದ ಅಲ್ಲದೇ ವಾಹನದ ಮಾಲೀಕರಿಗೆ ಸಾಕಷ್ಟು ಸಮಯಾವಕಾಶ ನೀಡಿದಾಗಲು ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಮೇಲೆ ಹಕ್ಕು ಸಾಧಿಸದೇ ಇರುವುದರಿಂದ ಅಲ್ಲದೆ ಜಪ್ತಾಗಿರುವ ವಾಹನವು ಇಲಾಖಾ ವಶದಲ್ಲಿಯೇ ಇದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಹಾಳಾಗಿ ಸರ್ಕಾರದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಹಾಗೂ ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡ ಆದೇಶ.

**"ಆದೇಶ"**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ಆದ ನಾನು ಲಿಂಗದಹಳ್ಳಿ ಪೊಲೀಸ್ ಠಾಣಾ ಮೊಕದ್ದಮೆ ನಂ. 79/2007, ದಿನಾಂಕ:19.11.2007 ರಲ್ಲಿ ಜಪ್ತುಪಡಿಸಿದ ವಾಹನದ ಸಂಖ್ಯೆ:ಕೆ.ಎ. 18–ಇ:7577 ರ ಎಂ. 80 ಮೋಟಾರು ಸೈಕಲ್‌ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ)ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ)ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 29ನೇ ಆಗಸ್ಟ್ 2008 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಡೆಪ್ಯೂಟಿ
ಕಮೀಷನರ್ ಆಫ್ ಎಕ್ಸೈಸ್ ಚಿಕ್ಕಮಗಳೂರು
ಜಿಲ್ಲೆ, ಚಿಕ್ಕಮಗಳೂರು

ಪಿ.ಆರ್. 1044

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಎಸ್ ಡಿಕೆ/347/ಡಿಟಿಸಿಆರ್/2007–08, ದಿನಾಂಕ:27–01–2009**

**ಉಪಸ್ಥಿತರು :** ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ. ಜಿಲ್ಲೆ, ಮಂಗಳೂರು.

**ಪಿರ್ಯಾದುದಾರರು :**
ಪೋಲಿಸ್ ಉಪ ನಿರೀಕ್ಷಕರು
ಕೋಣಾಜೆ ಪೊಲೀಸ್
ಠಾಣೆ, ಕೋಣಾಜೆ

**ಆರೋಪಿಗಳು:**
1: ಎಂ.ಬಿ. ಅಬ್ಬಾಸ್ (32ವ)
ಬಿನ್ :ಖಾದ್ರಿ ಬ್ಯಾರಿ, ವಾಸ
ಹಿರೆಬಂಡಾಡಿ ಗ್ರಾಮ, ಪುತ್ತೂರು ತಾಲ್ಲೂಕು
2. ಸದಕ್‌ತುಲ್ಲಾ ಯಾನೆ ಸಾದಾಕ್ (33ವ),
ಬಿನ್ :ಅಬ್ದುಲ್ ರಹಿಮಾನ್
ವಾಸ:ಬಂಗೇರಕಟ್ಟೆ, ಬಲ್ಲಮಂಜ
ಮೊಡಂತ್ಯಾರು, ಮಜ್ಜನ ಗ್ರಾಮ
ಬೆಳ್ತಂಗಡಿ ತಾಲ್ಲೂಕು.
3. ಶಶಿ ವಾ: ಬಲ್ಲಮಂಜ, ಮಜ್ಜನ ಗ್ರಾಮ,
ಬೆಳ್ತಂಗಡಿ ತಾಲ್ಲೂಕು

**ವಾಹನ ಮಾಲೀಕರು :**
ಶ್ರೀ ಇಬ್ರಾಹಿಂ, ಬಿನ್: ಖಾದ್ರಿ ಬ್ಯಾರಿ
ಅಮ್‌ದಲ್ ಹೌಸ್, ಮಂಜಿನ,
ಬೆಳ್ತಂಗಡಿ ತಾಲ್ಲೂಕು, ದ.ಕ. ಜಿಲ್ಲೆ.

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ: 21-1-2008 ರಂದು ಫಿರ್ಯಾದುದಾರರು ಸಿಬ್ಬಂದಿಗಳೊಂದಿಗೆ ಇಲಾಖಾ ಜೀಪಿನೊಂದಿಗೆ ಬಂಟ್ವಾಳ ತಾಲ್ಲೂಕು ಕೈರಂಗಳ ಗ್ರಾಮದ ಶ್ರೀಕ್ಷೇತ್ರ ಉಳ್ಳಾಲ್ತಿ ಅಮ್ಮನವರ ಕ್ಷೇತ್ರ, ಕೂಟತ್ತಾಜೆ ದ್ವಾರದಿಂದ ನಂದರ ಪದವು ಎಂಬಲ್ಲಿ ವಾಹನಗಳನ್ನು ತಪಾಸಣೆ ಮಾಡುತ್ತಿರುವ ಸಂದರ್ಭದಲ್ಲಿ ಎದುರು ಕಡೆಯಿಂದ ಬರುತ್ತಿದ್ದ ಜೀಪನ್ನು ನಿಲ್ಲಿಸಲು ಸೂಚನೆ ನೀಡಿದಾಗ ಸದರಿ ವಾಹನವನ್ನು ಅದರ ಚಾಲಕರು ನಿಲ್ಲಿಸಿ ಚಾಲಕ ಮತ್ತು ಇನ್ನೊಬ್ಬ ವ್ಯಕ್ತಿ ಓಡಿ ಹೋಗಲು ಪ್ರಯತ್ನಿಸಿದ್ದು, ಜೀಪಿನಲ್ಲಿದ್ದ ಒಬ್ಬಾತನನ್ನು ಸುತ್ತುವರಿದು ಹಿಡಿದು ನೋಡಲಾಗಿ, ಸದರಿ ಜೀಪಿನಲ್ಲಿ ಪಾಲಿಥೀನ್ ಚೀಲಗಳಲ್ಲಿ ಸರಕು ತುಂಬಿಕೊಂಡಿರುವುದು ಕಂಡು ಬಂದಿದ್ದು, ಸದರಿ ಸರಕಿನ ಬಗ್ಗೆ ಸದರಿಯವರಲ್ಲಿ ವಿಚಾರಿಸಿದಾಗ ಸಮರ್ಪಕವಾದ ಉತ್ತರ ನೀಡದೆ ತಡವರಿಸಿದಾಗ ಜೀಪಿನಲ್ಲಿದ್ದ ಸರಕನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಪಾಲಿಥಿನ್ ಚೀಲಗಳಲ್ಲಿ ಸಾರಾಯಿ ತುಂಬಿದ ಸಾರಾಯಿ ಸ್ಯಾಚೆಟ್‌ಗಳನ್ನು ಇಟ್ಟಿರುವುದು ಕಂಡು ಬಂತು ಸದರಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಟ ಮಾಡಲು ಪರವಾನಿಗೆ ಇದೆಯೇ ಎಂದು ವಿಚಾರಿಸಿದಾಗ ಯಾವುದೂ ಇಲ್ಲವೆಂದು ತಿಳಿಸಿರುವ ಮೇರೆಗೆ ಸದರಿಯವರ ಹೆಸರು ಮತು ವಿಳಾಸವನ್ನು ಕೇಳಲಾಗಿ, ತನ್ನ ಹೆಸರು ಎಂ.ಬಿ. ಅಬ್ಬಾಸ್ (32 ವ) ಬಿನ್ :ಖಾದ್ರಿ ಬ್ಯಾರಿ, ವಾಸ ಹಿರೆಬಂಡಾಡಿ ಗ್ರಾಮ., ಪುತ್ತೂರು ತಾಲ್ಲೂಕು ಮತ್ತು ಓಡಿ ಹೋದವನ ಹೆಸರು ಸದಕ್ ತುಲ್ಲಾ ಯಾನೆ ಸಾದಾಕ್ (33ವ) ಬಿನ್ :ಅಬ್ದುಲ್ ರಹಿಮಾನ್, ವಾಸ:ಬಂಗೇರಕಟ್ಟೆ, ಬಲ್ಲಮಂಜ ಮೊಡಂತ್ಯಾರು, ಮಜ್ಜನ ಗ್ರಾಮ, ಬೆಳ್ತಂಗಡಿ ತಾಲ್ಲೂಕು ಮತ್ತು ಇನ್ನೊಬ್ಬಾತನ ಹೆಸರು ಶಶಿ, ವಾಸ:ಬಲ್ಲಮಂಜ ಮಜ್ಜನ ಗ್ರಾಮ, ಬೆಳ್ತಂಗಡಿ ತಾಲ್ಲೂಕು ಎಂಬುದಾಗಿ ತಾವುಗಳು ಸಾರಾಯಿ ಸ್ಯಾಚೆಟ್‌ಗಳನ್ನು ಅಕ್ರಮವಾಗಿ ಮಾರಾಟಕೋಸ್ಕರ ಕೊಂಡು ಹೋಗುತ್ತಿರುವುದಾಗಿ ತಿಳಿಸಿರುತ್ತಾರೆ.

ಜೀಪಿನಲ್ಲಿದ್ದ ಪಾಲಿಥಿನ್ ಚೀಲಗಳಲ್ಲಿದ್ದ ಸಾರಾಯಿ ಸ್ಯಾಚೆಟ್‌ಗಳನ್ನು ಪರಿಶೀಲಿಸಿದಾಗ ಈ ಕೆಳಗಿನಂತೆ ಇರುತ್ತದೆ.

1) 9 ಪಾಲಿಥಿನ್ ಚೀಲಗಳಲ್ಲಿ ತಲಾ 500 ರಂತೆ ಒಟ್ಟು 100 ಎಂ.ಎಲ್.ನ 4500 ಸಾರಾಯಿ ಸ್ಯಾಚೆಟ್‌ಗಳು- 450-000 ಲೀಟರ್ ಸಾರಾಯಿ

2) ಒಂದು ಪಾಲಿಥೀನ್ ಚೀಲಗಳಲ್ಲಿ 100 ಎನ್.ಎಲ್.ನ 350 ಸಾರಾಯಿ ಸ್ಯಾಚೆಟ್‌ಗಳು 35-000 ಲೀಟರ್ ಸಾರಾಯಿ ಒಟ್ಟು:485-000 ಲೀಟರ್ ಸಾರಾಯಿ.

ಸದರಿ ಸಾರಾಯಿ ಸ್ಯಾಚೆಟ್‌ಗಳಿಂದ ರಾಸಾಯನಿಕ ಪರೀಕ್ಷೆಗಾಗಿ ಪ್ರತಿ ಪಾಲಿಥೀನ್ ಚೀಲಗಳಿಂದ ತಲಾ 10 ರಂತೆ ಸಾರಾಯಿ ಸ್ಯಾಚೆಟ್‌ಗಳನ್ನು ತೆಗೆದಿರಿಸಿ ಇವುಗಳನ್ನು ಪ್ರತ್ಯೇಕವಾಗಿ ಪ್ಲಾಸ್ಟಿಕ್ ಚೀಲದಲ್ಲಿ ಹಾಕಿ ಭದ್ರಪಡಿಸಿ ಬಿಳಿ ಬಟ್ಟೆಯಿಂದ ಸುತ್ತಿ ಅರಗು ಸೀಲ್ ಮಾಡಿ ಪಂಚರ ಸಹಿ ಇರುವ ಚೀಟಿಯನ್ನು ಅಂಟಿಸಿ ಅನುಕ್ರಮವಾಗಿ 1ಎ ರಿಂದ 10ಎ ತನಕ ಸಂಖ್ಯೆಯನ್ನು ನೀಡಿರುತ್ತಾರೆ. ಸಾರಾಯಿ ಸ್ಯಾಚೆಟ್‌ಗಳನ್ನು ಪರಿಶೀಲಿಸಿದಾಗ, ಅದರ ಮೇಲೆ 100 ಎಂ.ಎಲ್. ನ 35 ಡಿಗ್ರಿ ಯು.ಪಿ. ಗೌರಿ ಇಂಡಸ್ಟ್ರೀಸ್ (ಕರ್ನಾಟಕ), ಪ್ರ.6 ನಂ:54, 55 ಬಿ.ಹೆಚ್. ರಸ್ತೆ, ಕೋಲಾರ ಜಿಲ್ಲೆ ಲೈಸನ್ಸ್ ಸಂಖ್ಯೆ:ಇಸಿಡಿ/14/ಡಿ ಮತ್ತು ಎ/2006-07 ದಿ:19.8.2006 ತಾಲ್ಲೂಕು ಕೋಲಾರ (ಸರಕಾರಿ ಉಗ್ರಾಣದಲ್ಲಿ ತಯಾರಿಸಲ್ಪಟ್ಟಿದ್ದು) ಹಾಗೂ ಅದರ ಕೆಳಗಡೆ ಮದ್ಯಪಾನ ಆರೋಗ್ಯಕ್ಕೆ ಹಾನಿಕಾರ ಎಂದು ಬರೆದಿರುತ್ತದೆ. ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಟ ಮಾಡುತ್ತಿದ್ದ ಜೀಪನ್ನು ಪರಿಶೀಲಿಸಿದಾಗ ಇದು ಮಹೇಂದ್ರ ಎಂಡ್ ಮಹೇಂದ್ರ ಕಂಪೆನಿಯ ಹಳೆಯ ಜೀಪ್ ಆಗಿದ್ದು, ಇದರ ಮುಂಭಾಗ ಮತ್ತು ಹಿಂಭಾಗದಲ್ಲಿ ಕೆಎ-19-ಎಂ-2394 ಎಂದು ನೋಂದಣಿ ಸಂಖ್ಯೆ ಇರುತ್ತದೆ.

**ಸ್ಥಳ ಚೆಕ್‌ಬಂದಿ:**

ಬಂಟ್ವಾಳ ತಾಲೂಕು ಕೈರಂಗಳ ಗ್ರಾಮದ ಶ್ರೀಕ್ಷೇತ್ರ ಉಳ್ಳಾಲ್ತಿ ಅಮ್ಮನವರ ಕ್ಷೇತ್ರ ಕೂಟತ್ತಾಜೆ ಸ್ವಾಗತ ಗೋಪುರದಿಂದ ನಂದರಪದವು ಕಡೆಗೆ ಹೋಗುವ ಸಾರ್ವಜನಿಕ ಡಾಮಾರು ರಸ್ತೆಯಲ್ಲಿ ನಂದರ ಪದವು ಎಂಬಲ್ಲಿ ಅಪರಾಧ ಪತ್ತೆಯಾಗಿದ್ದು, ಸದರಿ ಸ್ಥಳದಲ್ಲಿ ಡಾಮಾರು ರಸ್ತೆಯು ಸುಮಾರು 10 ಅಡಿ ಅಗಲ ಇದ್ದು, ಸದರಿ ಸ್ಥಳದಿಂದ ಸುಮಾರು 30 ಅಡಿ ದೂರ ಪಶ್ಚಿಮದಲ್ಲಿ ಈಶ್ವರ ಭಟ್ ಎಂಬುವರಿಗೆ ಸೇರಿದ ಖಾಲಿ ಮನೆ ಕಟ್ಟಡ, ಪೂರ್ವಕ್ಕೆ ಗುಡ್ಡ, ಪ್ರದೇಶ, ದಕ್ಷಿಣಕ್ಕೆ ಕೂಟತ್ತಾಜೆ ಪೊಯತ್ತಬೈಲ್ ಕಡೆಗೂ, ಉತ್ತರಕ್ಕೆ ಮಂಜನಾಡಿ ಹೂಹಾಕುವ ಕಲ್ಲು ಕಡೆಗೆ ಹೋಗುವ ರಸ್ತೆಯು ಮುಂದುವರಿಯತ್ತದೆ. ಸದರಿ ಅಪರಾಧ ಸ್ಥಳದಲ್ಲಿ ಮಹಜರನ್ನು ದಿ:21.1.2008ರಂದು ಬೆಳಿಗ್ಗೆ 7.50 ಗಂಟೆಯಿಂದ ಬೆಳಿಗ್ಗೆ 9.50 ಗಂಟೆಯ ತನಕ ಸ್ಥಳದಲ್ಲಿಯೇ ಬರೆದು ಮುಗಿಸಿರುತ್ತಾರೆ.

ಕರ್ನಾಟಕದಲ್ಲಿ ಸಾರಾಯಿ ನಿಷೇಧ ಜಾರಿಯಲ್ಲಿದ್ದು, ಅಕ್ರಮವಾಗಿ ಸಾರಾಯಿಯನ್ನು ಮಾರಾಟಕ್ಕಾಗಿ ಸಾಗಾಟ ಮಾಡುತ್ತಿರುವುದು ಸಾರಾಯಿ ನಿಷೇಧ ಕಾಯಿದೆ ಮತ್ತು ಕರ್ನಾಟಕ ಅಬಕಾರಿ ಕಾಯಿದೆ ಕಲಂ 13 ಸೆಕ್ಷನ್ 32,34 ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಆರೋಪಿಯನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ, ಅಕ್ರಮ ಸಾರಾಯಿ ಸ್ಯಾಚೆಟ್‌ಗಳನ್ನು ಮತ್ತು ಸಾಗಾಟ ಮಾಡಿದ ಜೀಪನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಆರೋಪಿಗಳ ವಿರುದ್ದ ತಕ್ಷೀರು

ಸಂಖ್ಯೆ:12/2008 ರಂತೆ ಮೊಕದ್ದಮೆಯನ್ನು ದಾಖಲೆ ಮಾಡಿ ಸೊತ್ತುಗಳ ಪಟ್ಟಿ ತಯಾರಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೆ ಹಾಗೂ ಮೇಲಾಧಿಕಾರಿಗಳಿಗೆ ವರದಿ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣಕ್ಕೆ ಸಂಬಂಧಪಟ್ಟ ಪಂಚನಾಮೆ ಪ್ರತಿ, ಪ್ರಥಮ ಮಾಹಿತಿ ವರದಿ ಪ್ರತಿ, ಸೊತ್ತುಗಳ ಪಟ್ಟಿಯ ಪ್ರತಿಯನ್ನು ಫಿರ್ಯಾದಿನೊಂದಿಗೆ ಪ್ರಾಧಿಕಾರಕ್ಕೆ ಸಲ್ಲಿಸಿ, ಪ್ರಕರಣದ ಸೊತ್ತುಗಳನ್ನು ಹಾಗೂ ದಾಖಲೆ ಪತ್ರಗಳನ್ನು ಸೊತ್ತುಗಳನ್ನು ಮುಟ್ಟುಗೋಲುಗೊಳಿಸುವ ಮುಂದಿನ ತನಿಖೆ ಬಗ್ಗೆ ಅಬಕಾರಿ ಉಪ ನಿರೀಕ್ಷಕರು ಬಂಟ್ವಾಳ ಜಾರಿ ಮತ್ತು ತನಿಖೆ ಇವರಿಗೆ ಹಸ್ತಾಂತರಿಸಲು ದಿ:28.1.2008 ರಂದು ಈ ಪ್ರಾಧಿಕಾರಕ್ಕೆ ಕೋರಿದ್ದು, ಈ ಪ್ರಾಧಿಕಾರವು ದಿ:4.2.2008 ರಂದು ಪ್ರಕರಣದಲ್ಲಿ ಜಪ್ತು ಮಾಡಿರುವ ಸೊತ್ತುಗಳನ್ನು ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ಸದರಿ ಪ್ರಕರಣದ ಸೊತ್ತುಗಳನ್ನು ಅಬಕಾರಿ ಉಪ ನಿರೀಕ್ಷಕರು (1), ಬಂಟ್ವಾಳಾ ಜಾರಿ ಮತ್ತು ತನಿಖೆ ಬಂಟ್ವಾಳ ಇವರು ದಿ:14.2.2008 ರಂದು ಸ್ವೀಕರಿಸಿರುತ್ತಾರೆ. ತನಿಖೆಯನ್ನು ಪ್ರಾರಂಭಿಸಿ ಅಬಕಾರಿ ಉಪ ನಿರೀಕ್ಷಕರು (ನಂ 1), ಬಂಟ್ವಾಳ ವಲಯ, ಬಂಟ್ವಾಳ ಇವರ ತನಿಖಾ ವರದಿ ಸಂಖ್ಯೆ:ಅ.ಇ/ಆರ್/ಸಿ.ಆರ್/45/07–08 ದಿ:5.9.2008ರ ವರದಿಯಲ್ಲಿ ವಶಪಡಿಸಿಕೊಂಡ ಸಾರಾಯಿಂದ ಮಾದರಿಯಾಗಿ ತೆಗೆದ ಸಾರಾಯಿ ಸ್ಯಾಚೆಟ್‌ಗಳನ್ನು ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಗೆ ದಿ:13.2.2008 ರಂದು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ಸದರಿ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ಪತ್ರ ಸಂಖ್ಯೆ:ಇ–80–10:21:2007–08 ದಿ:11–3–2008ರಲ್ಲಿ ಜಪ್ತು ಮಾಡಲ್ಪಟ್ಟಿರುವ ಸಾರಾಯಿಯ ಮದ್ಯಸಾರದ ಪ್ರಮಾಣ ತಲಾ 32.0 ಇರುವುದಾಗಿ ಇದು ಮಾನವನ ಸೇವನೆಗೆ ಯೋಗ್ಯವಲ್ಲ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ. ಇದರಂತೆ ಅಬಕಾರಿ ಉಪ ನಿರೀಕ್ಷಕರು (ನಂ. 1) ಬಂಟ್ವಾಳ ವಲಯ ಇವರ ತನಿಖಾ ವರದಿಯಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುವ ಮೇರೆಗೆ ವಶಪಡಿಸಿಕೊಂಡ ಸೊತ್ತುಗಳ ಪೈಕಿ ವಾಹನ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ ಜಪ್ತುಪಡಿಸಲಾಗಿರುವ (ಮಾದರಿಗಳನ್ನು ಹೊರತುಪಡಿಸಿ) ಸಾರಾಯಿ ಸ್ಯಾಚೆಟ್‌ಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಸಾರಾಯಿಯನ್ನು ಸರಕಾರದ ಅಧಿಸೂಚನೆ ಸಂಖ್ಯೆ:ಎಫ್‌ಡಿ/06/ಪಿಐಎಸ್/07 ದಿ:13.7.2007ರಂತೆ ಮಾರಾಟ ಮಾಡಲು ನಿಷೇಧವಿದ್ದು, ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾದ ಸೊತ್ತುಗಳನ್ನು ನಾಶಪಡಿಸುವಂತೆ ಆದೇಶ ಇರುವುದರಿಂದ, ಸದರಿ ಅಧಿಸೂಚನೆಯನ್ನು ಅನುಸರಿಸಿ ಕಲಂ 43(ಎ) 3ರ ಅನ್ವಯ ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ಸಮಕ್ಷಮ ಅಬಕಾರಿ ಆಯುಕ್ತರು, ಕರ್ನಾಟಕ ರಾಜ್ಯ ಬೆಂಗಳೂರು, ಇವರ ಸುತ್ತೋಲೆ ಸಂಖ್ಯೆ:ಇಸಿಸಿ/73/ಸಿಆರ್‌ಎಂ/2004 ದಿ:12.9.2005 ರ ಮಾರ್ಗಸೂಚಿಗಳನ್ನು ಅನುಸರಿಸಿ ಮಹಜರು ಜರುಗಿಸಿ ನಾಶಪಡಿಸಲು ದಿ:1.12.2008 ರಂದು ಆದೇಶ ನೀಡಲಾಗಿರುತ್ತದೆ.

ಪ್ರಕರಣದಲ್ಲಿ ಜಪ್ತುಮಾಡಲಾದ ಜೀಪ್ ಸಂಖ್ಯೆ:ಕೆಎ–12–ಎಂ–2394 ರ ಆರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸವನ್ನು ಸಂಬಂಧಿಸಿದ ಪ್ರಾಧಿಕಾರದಿಂದ ಪಡೆದು ಸಲ್ಲಿಸುವಂತೆ ಅಬಕಾರಿ ಉಪ ನಿರೀಕ್ಷಕರು (ನಂ. 1), ಬಂಟ್ವಾಳ ಇವರಿಗೆ ಈ ಪ್ರಾಧಿಕಾರದಿಂದ ದಿ:14.3.2008 ರಂದು ನೋಟೀಸನ್ನು ನೀಡಲಾಗಿದ್ದು, ಅಬಕಾರಿ ಉಪ ನಿರೀಕ್ಷಕರು ಸದರಿ ಜೀಪಿನ ಬಗ್ಗೆ ತನಿಖಾ ಕಾರ್ಯವನ್ನು ಪ್ರಾರಂಭಿಸಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ರವರಿಗೆ ಸದರಿ ವಾಹನದ ಮಾಲೀಕರ ಪೂರ್ಣ ವಿವರದ ಬಗ್ಗೆ ಪತ್ರ ಬರೆಯಲಾಗಿದ್ದು, ಸಾರಿಗೆ ಅಧಿಕಾರಿಗಳು, ಮಂಗಳೂರು ಇವರಿಂದ ದಿ:4.9.2008ರಂದು ನೀಡಲ್ಪಟ್ಟ ಬಿ ರಿಜಿಸ್ಟಾರ್ ದಾಖಲೆ ಪತ್ರಗಳಲ್ಲಿ ವಾಹನದ ನೋಂದಣಿ ಸಂಖ್ಯೆ:ಕೆಎ–12–ಎಂ–2394ರ ಜೀಪು ಆಗಿದ್ದು, ಇದರ ತಯಾರಿಕ ಕಂಪೆನಿ ಮಹೇಂದ್ರ ಎಂದು ಮಹೇಂದ್ರ ಕಂಪೆನಿಯಾಗಿದ್ದು ಮತ್ತು ಇದು 1986 ರ ಮಾಡೆಲ್ ಆಗಿರುತ್ತದೆ. ಇದರ ಚಾಸೀಸ್ ಸಂಖ್ಯೆ:ಸಿಜೆ 500 ಡಿ2 ಡಬ್ಲ್ಯೂಡಿ ಡಿಜೆ 04456 ಮತ್ತು ಇಂಜೀನ್ ನಂ:ಡಿಜೆ–04456 ಆಗಿದ್ದು, ಇದರ ಆರ್.ಸಿ. ಮಾಲೀಕರಾದ ಶ್ರೀ ಇಬ್ರಾಹಿಂ, ಬಿನ್ :ಖಾದ್ರಿ ಬ್ಯಾರಿ, ಅಂದಾಲ್ ಮನೆ, ಮಜ್ಜನ ಗ್ರಾಮ, ಬೆಳ್ತಂಗಡಿ ತಾಲ್ಲೂಕು ಎಂದು ತಿಳಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರು ನೀಡಿರುವ ಬಿ ರಿಜಿಸ್ಟಾರ್ ದಾಖಲೆ ಪತ್ರಗಳ ಪ್ರಕಾರ ದಿ:26.10.2002 ರಿಂದ ಶ್ರೀ ಇಬ್ರಾಹಿಂ, ಬಿನ್ :ಖಾದ್ರಿ ಬ್ಯಾರಿ, ಅಂದಾಲ್ ಮನೆ, ಮಜ್ಜನ ಗ್ರಾಮ ಬೆಳ್ತಂಗಡಿ ತಾಲ್ಲೂಕು ಇವರ ಮಾಲೀಕತ್ವದಲ್ಲಿದ್ದು, ಆರ್.ಸಿ. ಮಾಲೀಕರಿಗೆ ಮತ್ತು ಆರೋಪಿಗಳಾದ ಎಂ.ಬಿ. ಅಬ್ಬಾಸ್ (32 ವ) ಬಿನ್ :ಖಾದ್ರಿ ಬ್ಯಾರಿ, ವಾಸ:ಹಿರೆಬಂಡಾಡಿ ಗ್ರಾಮ, ಪುತ್ತೂರು ತಾಲ್ಲೂಕು ಮತ್ತು ಸದಕ್‌ತುಲ್ಲಾ ಯಾನೆ ಸಾದಾಕ್ (33 ವ), ಬಿನ್:ಅಬ್ದುಲ್ ರಹಿಮಾನ್, ವಾಸ:ಬಂಗೇರಕಟ್ಟೆ, ಬಲ್ಲಮಂಜ ಮೊಡಂತ್ಯಾರು, ಮಜ್ಜನ ಗ್ರಾಮ, ಬೆಳ್ತಂಗಡಿ ತಾಲ್ಲೂಕು ಹಾಗೂ ಶಶಿ, ವಾಸ:ಬಲ್ಲಮಂಜ, ಮಜ್ಜನ ಗ್ರಾಮ, ಬೆಳ್ತಂಗಡಿ ತಾಲ್ಲೂಕು ಇವರುಗಳಿಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಸೆಕ್ಷನ್

43(ಬಿ) ಪ್ರಕಾರ ಕಾರಣ ಕೇಳಿ ನೋಟೀಸುಗಳನ್ನು ಈ ಪ್ರಾಧಿಕಾರದಿಂದ ದಿ:1.12.2008 ರಂದು ನೋಂದಣಿ ಅಂಚೆ ಮೂಲಕ ರವಾನಿಸಲಾಗಿದ್ದು, ವಾಹನದ ಮಾಲೀಕರಾದ ಶ್ರೀ ಇಬ್ರಾಹಿಂ ಇವರು ದಿ:15.12.2008 ರಂದು ಕಾರಣ ಕೇಳಿ ನೋಟೀಸನ್ನು ಸ್ವೀಕರಿಸಿದ್ದು, ಈ ಪ್ರಾಧಿಕಾರಕ್ಕೆ ದಿ:17.12.2008 ರಂದು ಸ್ವೀಕೃತ ರಶೀದಿ ಬಂದಿರುತ್ತದೆ. ಆರೋಪಿಗಳಿಗೆ ನೀಡಿದ ಕಾರಣ ಕೇಳಿ ನೋಟೀಸು ಸ್ವೀಕೃತಿಯಾಗದೆ ಈ ಕಛೇರಿಗೆ ಹಿಂದೆ ಬಂದಿರುತ್ತದೆ.

ಅಬಕಾರಿ ಉಪ ನಿರೀಕ್ಷಕರು (ನಂ.1) ಬಂಟ್ವಾಳ ವಲಯ, ಬಂಟ್ವಾಳ ಇವರ ತನಿಖಾ ವರದಿ ಸಂಖ್ಯೆ:ಆರ್.ಸಿ.ಆರ್/45/07–08 ದಿ:5–9–2008 ರಂದು ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ ಇವರ ಮುಖಾಂತರ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿರುವ ಜೀಪು ಸಂಖ್ಯೆ:ಕೆಎ–12–ಎಂ–2394 ರ ಮಾಲೀಕತ್ವದ ಬಗ್ಗೆ ಹಾಗೂ ವಾಹನದ ಬಿಡುಗಡೆ ಕೋರಿ ಇದುವರೆಗೂ ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. ವಾಹನವನ್ನು ಅಕ್ರಮ ಸಾಗಾಣಿಕೆಗೆ ಬಳಸಿರುವುದು ಖಚಿತವಾಗಿರುವುದರಿಂದ, ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಜೀಪು ಸಂಖ್ಯೆ:ಕೆಎ–12–ಎಂ–2394ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಾಧಿಕಾರದಿಂದ ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪ್‌ನ ಆರ್.ಸಿ. ಮಾಲೀಕರಿಗೆ ಮತ್ತು ಆರೋಪಿಗಳಿಗೆ ನೋಂದಣಿ ಅಂಚೆ ಮೂಲಕ ಕಾರಣ ಕೇಳಿ ನೋಟೀಸುಗಳನ್ನು ನೀಡಿರುತ್ತದೆ. ಆರ್.ಸಿ. ಮಾಲೀಕರಾದ ಶ್ರೀ ಇಬ್ರಾಹಿಂ ಇವರು ಕಾರಣ ಕೇಳಿ ನೋಟೀಸನ್ನು ಸ್ವೀಕರಿಸಿದ್ದರು. ಸದರಿ ಪ್ರಕರಣವು ದಾಖಲಾಗಿ ಸುಮಾರು ಒಂದು ವರ್ಷ ಕಳೆದರೂ ಈ ಪ್ರಾಧಿಕಾರದ ಮುಂದೆ ವಾಹನವನ್ನು ಅಬಕಾರಿ ಕಾಯಿದೆಯಡಿ ಅಪರಾಧಕ್ಕೆ ಬಳಸಿರುವುದಿಲ್ಲವೆಂದು ಸಾಬೀತುಪಡಿಸಲು ದಾಖಲಾತಿಗಳೊಂದಿಗೆ ತನಿಖಾಧಿಕಾರಿಯವರ ಕಛೇರಿಯಲ್ಲಿ ಮತ್ತು ಈ ಪ್ರಾಧಿಕಾರದ ಮುಂದೆ ವಾಹನದ ಮಾಲೀಕತ್ವವನ್ನು ಕೋರಿ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಯಾವುದೇ ವ್ಯಕ್ತಿಯು ಹಾಜರಾಗಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43 (ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಪೊಲೀಸ್ ಉಪ ನಿರೀಕ್ಷಕರು, ಕೋಣಾಜೆ ಪೊಲೀಸ್ ಠಾಣೆ, ಕೋಣಾಜೆ ಇವರು ದಾಖಲಿಸಿರುವ ಪ್ರಕರಣದಲ್ಲಿ ಆರೋಪಿಗಳು ಅಕ್ರಮವಾಗಿ 485–000 ಲೀಟರ್ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಣಿಕೆ ಮಾಡುವಾಗ ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಸಾರಾಯಿ ಎಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಆರೋಪಿಗಳು ದಿ:21.1.2008 ರಂದು ಅಕ್ರಮವಾಗಿ 100 ಎಂ.ಎಲ್.ನ 4850 ಸಾರಾಯಿ ಸ್ಯಾಚೆಟ್‌ಗಳನ್ನು ಜೀಪು ಸಂಖ್ಯೆ:ಕೆಎ 12–ಎಂ–2394 ರಲ್ಲಿ ಸಾಗಾಟ ಮಾಡಿರುವುದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 13, 14 ಮತ್ತು 32, 34, 38ಎ ಹಾಗೂ 43ಎ ರಡಿ ಅಪರಾದ ಎಸಗಿರುವುದು ಸಾಬೀತಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಜೀಪು ಸಂಖ್ಯೆ:ಕೆಎ–12–ಎಂ–2394 ವಶಪಡಿಸಿಕೊಂಡು ಸುಮಾರು ಒಂದು ವರ್ಷ ಕಳೆದರೂ ಯಾವುದೇ ವ್ಯಕ್ತಿಯು ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ.ಜಿಲ್ಲೆ, ಮಂಗಳೂರು ಇವರು ನೀಡಿರುವ ಬಿ ರಿಜಿಸ್ಟಾರ್ ದಾಖಲಾತಿ ಪ್ರಕಾರ ವಾಹನ ಮಾಲೀಕರಿಗೆ ಮತ್ತು ಆರೋಪಿಗಳ ವಿಳಾಸಕ್ಕೆ ನೀಡಿರುವ ಕಾರಣ ಕೇಳಿ ನೋಟೀಸುಗಳನ್ನು ಆರ್.ಸಿ. ಮಾಲೀಕರಾದ ಶ್ರೀ ಇಬ್ರಾಹಿಂ ಇವರು ಸ್ವೀಕರಿಸಿದ್ದು, ಈ ಪ್ರಾಧಿಕಾರಕ್ಕೆ ಯಾವುದೇ ಸಮಂಜಸವಾದ ಉತ್ತರ ನೀಡದೇ ಇರುವ ಹಿನ್ನೆಲೆಯಲ್ಲಿ ವಾಹನ ಮಾಲೀಕರ ತಿಳುವಳಿಕೆಯಿಂದ ಹಾಗೂ ಅವರೇ ಈ ಕೃತ್ಯದಲ್ಲಿ ಶಾಮೀಲಾಗಿ ಈ ಕೃತ್ಯವೆಸಗಿರುವುದು ಸ್ಪಷ್ಟವಾಗಿ ಕಾಣಬರುತ್ತದೆ. ಆದುದರಿಂದ ವಾಹನ ಮಾಲೀಕರು ಪ್ರಕರಣವನ್ನು ನಡೆಸಲು ಉತ್ಸುಕರಿಲ್ಲವೆಂದು ಭಾವಿಸಿ ಮತ್ತು ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಆಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ತಿಳಿದು ಬರುವುದರಿಂದ, ಕಲಂ 43(ಬಿ) ನಡವಳಿಗಳನ್ನು ಕೈಬಿಟ್ಟು ಕಲಂ 43(ಸಿ) ರಡಿಯಲ್ಲಿ ಏಕಪಕ್ಷೀಯವಾಗಿ

ನಿರ್ಣಯವನ್ನು ತೆಗೆದುಕೊಂಡು ಸದರಿ ಜೀಪನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂಬ ಹಿನ್ನಲೆಯಲ್ಲಿ ಈ ಆದೇಶ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ ಅಧಿನಿಯಮ 1965ರ ಕಲಂ 43 (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43 (ಬಿ) ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ನಿಯಮ 43 (ಎ)(2) ರ ಅನ್ವಯ ಪೊಲೀಸ್ ಉಪ ನಿರೀಕ್ಷಕರು, ಕೋಣಾಜೆ ಪೊಲೀಸ್ ಠಾಣೆ, ಕೋಣಾಜೆ, ಇವರ ತಕ್ಷೀರು ಸಂಖ್ಯೆ:12/08 ದಿ:21.1.2008 ರಂದು ಜಪ್ತು ಮಾಡಿರುವ ವಾಹನಸಂಖ್ಯೆ: ಕೆಎ–12–ಎಂ–2394 (ಚಾಸೀಸ್ ನಂ:ಸಿಜೆ 500 ಡಿ2 ಡಬ್ಲ್ಯೂ ಡಿಡಿಜೆ–04456 ಮತ್ತು ಎಂಜಿನ್ ಸಂಖ್ಯೆ:ಡಿಜೆ–04456) ಜೀಪನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಸಿ) ಯನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್. 190

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ
ಕಮೀಷನರ್ ಆಫ್ ಎಕ್ಸೈಸ್ ದಕ್ಷಿಣ ಕನ್ನಡ ಜಿಲ್ಲೆ
ಮಂಗಳೂರು

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ–4, ಬೆಂಗಳೂರು**

**ಸಂಖ್ಯೆ:ಪಿಜಿಎ/ಎಸ್.ಆರ್–318/2006–07**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| ಶ್ರೀಮತಿ ರತ್ನಮ್ಮ<br>ಕೋಂ ಲೇಟ್ ಸಿ. ನಾಗರಾಜು<br>ದೊಡ್ಡ ಆಲದಹಳ್ಳಿ ಗ್ರಾಮ ಮತ್ತು ಅಂಚೆ<br>ನಾಲೆ ಬೀದಿ, ಕನಕಪುರ | | ವಿಭಾಗೀಯ ನಿಯಂತ್ರಕರು<br>ಕೆ.ಎಸ್.ಆರ್.ಟಿ.ಸಿ.,<br>ಬೆಂಗಳೂರು ಗ್ರಾಮಾಂತರ ವಿಭಾಗ,<br>ದೀಪಾಂಜಲಿನಗರ, ಮೈಸೂರು ರಸ್ತೆ,<br>ಬೆಂಗಳೂರು–560 026 |

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೇಲ್ಕಂಡ ಅರ್ಜಿದಾರರು ಈ ನ್ಯಾಯಾಲಯದಲ್ಲಿ ದಿನಾಂಕ:13.3.2007 ರಂದು ಉಪಧನ ಪಾವತಿ ಕಾಯ್ದೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಅವರ ಪತಿ ಲೇಟ್ ಸಿ. ನಾಗರಾಜು ಇವರು ಪ್ರತಿವಾದಿ ಸಂಸ್ಥೆಯಲ್ಲಿ ತಮ್ಮ 19 ವರ್ಷಗಳ ಸೇವೆ ಸಲ್ಲಿಸಿ, ಸೇವೆಯಲ್ಲಿದ್ದಾಗಲೇ ದಿನಾಂಕ:26.4.2001 ರಂದು ಮರಣ ಹೊಂದಿದ್ದಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ರೀತ್ಯ ಬರಬೇಕಾದ ವ್ಯತ್ಯಾಸದ ಉಪಧನವನ್ನು ಕೊಡಿಸಿಕೊಡಬೇಕೆಂದು ಕೋರಿರುತ್ತಾರೆ

ಸದರಿ ದಾವೆಯ ವಿಚಾರಣೆ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿಯನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಹೆಚ್. ಉಮೇಶ**

ಪಿ.ಆರ್. 538

ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ನಿಯಂತ್ರಣಾಧಿಕಾರಿಗಳು
ಉಪಧನ ಪಾವತಿ ಕಾಯ್ದೆ, ವಿಭಾಗ–4, ಬೆಂಗಳೂರು